ಸದರಿ ರಾಜ್ಯಪತ್ರವನ್ನು 17ನೇ ಡಿಸೆಂಬರ್, 2009ರಂದು ಮತ್ತು 23ನೇ ಏಪ್ರಿಲ್ 2010 ರಂದು ಸಾರ್ವಜನಿಕರಿಗೆ ಲಭ್ಯವಾಗುವಂತೆ ಮಾಡಿದ್ದುದರಿಂದ; ಮತ್ತು ಮೇಲೆ ನಿರ್ದಿಷ್ಟಪಡಿಸಿದ ಅವಧಿಯೊಳಗಾಗಿ ಸ್ವೀಕರಿಸಿದ ಆಕ್ಷೇಪಣೆಗಳು ಮತ್ತು ಸಲಹೆಗಳನ್ನು ಪರಿಗಣಿಸಲಾಗಿರುವುದರಿಂದ;

ಈಗ, ಕರ್ನಾಟಕ ರಾಜ್ಯ ಸಿವಿಲ್ ಸೇವಾ ಅದಿನಿಯಮ, 1978ರ (1990ರ ಕರ್ನಾಟಕ ಅಧಿನಿಯಮ 14) 8ನೇ ಪ್ರಕರಣದೊಂದಿಗೆ ಓದಲಾದ 3ನೇ ಪ್ರಕರಣದ (1)ನೇ ಉಪ–ಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು, ಈ ಮೂಲಕ ಈ ಮುಂದಿನ ನಿಯಮಗಳನ್ನು ರಚಿಸುತ್ತದೆ, ಎಂದರೆ:–

**ನಿಯಮಗಳು**

**1.ಶೀರ್ಷಿಕೆ ಮತ್ತು ಪ್ರಾರಂಭ:–** (1) ಈ ನಿಯಮಗಳನ್ನು ಕರ್ನಾಟಕ ರಾಜ್ಯ ಮೀಸಲು ಪೊಲೀಸ್ (ನೇಮಕಾತಿ ಮತ್ತು ಸೇವಾ ಷರತ್ತುಗಳ) ನಿಯಮಗಳು, 2009 ಎಂದು ಕರೆಯತಕ್ಕದ್ದು.

(2) ಅವು ರಾಜ್ಯಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

**2. ನೇಮಕಾತಿ ವಿಧಾನ ಮತ್ತು ಕನಿಷ್ಠ ಅರ್ಹತೆ.–** ಕರ್ನಾಟಕ ರಾಜ್ಯ ಮೀಸಲು ಪೊಲೀಸ್ ಸೇವೆಗಳು ಈ ಕೆಳಗಿನ ಅನುಸೂಚಿಯ ಅಂಕಣ (2)ರಲ್ಲಿ ಗೊತ್ತುಪಡಿಸಿರುವ ವೇತನ ಶ್ರೇಣಿಗಳನ್ನು ಹೊಂದಿರುವ ಪ್ರತಿಯೊಂದು ಪ್ರವರ್ಗದ ಹುದ್ದೆಗಳನ್ನು ಒಳಗೊಂಡಿದ್ದು, ಆ ಹುದ್ದೆಗಳ ಸಂಖ್ಯೆ, ನೇಮಕಾತಿ ವಿಧಾನ ಮತ್ತು ಕನಿಷ್ಠ ಅರ್ಹತೆ, ಯಾವುದಾದರೂ ಇದ್ದರೆ, ಅದು ಅನುಸೂಚಿಯ ಅಂಕಣ (3), (4), (5), (6) ಮತ್ತು (7)ರಲ್ಲಿನ ಸಂವಾದಿ ನಮೂದುಗಳಲ್ಲಿ ಗೊತ್ತುಪಡಿಸಿದಂತೆ ಇರತಕ್ಕದ್ದು.

**3. ನಿರಸನ ಮತ್ತು ಉಳಿಸುವಿಕೆಗಳು:– (1)** ಕರ್ನಾಟಕ ರಾಜ್ಯ ಮೀಸಲು ಪೊಲೀಸ್ (ನೇಮಕಾತಿ ಮತ್ತು ಸೇವಾ ಷರತ್ತುಗಳ) ನಿಯಮಗಳು, 2004ನ್ನು ಈ ಮೂಲಕ ನಿರಸನಗೊಳಿಸಲಾಗಿದೆ:

ಪರಂತು, ಅಂಥ ನಿರಸನವು ಈ ಕೆಳಗಿನವುಗಳಿಗೆ ಬಾಧಕ ಉಂಟು ಮಾಡತಕ್ಕದ್ದಲ್ಲ:–

(ಎ) ಈ ನಿಯಮಗಳ ಈ ಹಿಂದಿನ ಜಾರಿ ಅಥವಾ ಸದ್ಭಾವನೆಯಿಂದ ಮಾಡಲಾದ ಅಥವಾ ಇದರ ಮೇರೆಗೆ ಕೈಗೊಳ್ಳಲಾದ ಯಾವುದೇ ಕ್ರಮ, ಅಥವಾ

(ಬಿ) ಇದರ ಮೇರೆಗೆ ಆರ್ಜಿಸಿದ, ಪ್ರಾಪ್ತವಾದ ಅಥವಾ ಗುರಿಯಾದ ಯಾವುದೇ ಹಕ್ಕು, ವಿಶೇಷ ಹಕ್ಕು, ಹೊಣೆ ಅಥವಾ ಹೊಣೆಗಾರಿಕೆ.

**ಅನುಸೂಚಿ**

**(2ನೇ ನಿಯಮ ನೋಡಿ)**

| ಕ್ರ. ಸಂ. | ಹುದ್ದೆಯ ಪ್ರವರ್ಗ ಮತ್ತು ವೇತನ ಶ್ರೇಣಿ | ಹುದ್ದೆಗಳ ಸಂಖ್ಯೆ | | ಒಟ್ಟು | ನೇಮಕಾತಿ ವಿಧಾನ | ಕನಿಷ್ಠ ಅರ್ಹತೆ |
|---|---|---|---|---|---|---|
| | | ಖಾಯಂ | ತಾತ್ಕಾಲಿಕ | | | |
| (1) | (2) | (3) | (4) | (5) | (6) | (7) |
| **1.** | **ಅಡಿಷನಲ್ ಡೈರೆಕ್ಟರ್ ಜನರಲ್ ಆಫ್ ಪೊಲೀಸ್, ಕೆಎಸ್ಆರ್ಪಿ** | **1** | **–** | **1** | ಐ.ಪಿ.ಎಸ್. ಕೇಡರಿನಲ್ಲಿ ಸೇರಿಸಲಾಗಿದೆ | |
| **2.** | **ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕೆಎಸ್ಆರ್ಪಿ** | **1** | **–** | **1** | ಐ.ಪಿ.ಎಸ್. ಕೇಡರಿನಲ್ಲಿ ಸೇರಿಸಲಾಗಿದೆ | |
| **3.** | **ಡೆಪ್ಯೂಟಿ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕೆಎಸ್ಆರ್ಪಿ** | **1** | **–** | **1** | ಐ.ಪಿ.ಎಸ್. ಕೇಡರಿನಲ್ಲಿ ಸೇರಿಸಲಾಗಿದೆ | |

| (1) | (2) | (3) | (4) | (5) | (6) | (7) |
|---|---|---|---|---|---|---|
| **4.** | **ಡೆಪ್ಯೂಟಿ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್,**<br>**(ನಾನ್–ಐಪಿಎಸ್ ಕೆಎಸ್‌ಆರ್‌ಪಿ)**<br>**(ರೂ.24450–31800)** | **1** | **–** | **1** | ಕಮಾಂಡೆಂಟ್‌ಗಳ ವೃಂದದಿಂದ ಮುಂಬಡ್ತಿ ಮೂಲಕ. | ಕಮಾಂಡೆಂಟ್‌ಗಳ ವೃಂದದಲ್ಲಿ ಐದು ವರ್ಷಗಳಿಗೆ ಕಡಿಮೆ ಇಲ್ಲದಂತೆ ಸೇವೆಯನ್ನು ಸಲ್ಲಿಸಿರತಕ್ಕದ್ದು:<br>ಪರಂತು, ಐದು ವರ್ಷಗಳಿಗಿಂತ ಕಡಿಮೆ ಇಲ್ಲದಂತೆ ಸೇವೆಯನ್ನು ಸಲ್ಲಿಸಿದ ಅಧಿಕಾರಿಯು ಲಭ್ಯವಿರದಿದ್ದಲ್ಲಿ, ಮೂರು ವರ್ಷ ಗಳಿಗಿಂತ ಕಡಿಮೆ ಇಲ್ಲದಂತೆ ಸೇವೆಯನ್ನು ಸಲ್ಲಿಸಿರುವ ಅಧಿಕಾರಿಯನ್ನು ಮುಂಬಡ್ತಿಗಾಗಿ ಪರಿಗಣಿಸಬಹುದು. |
| **5.** | **ಕಮಾಂಡೆಂಟ್**<br>**(ರೂ.18150–26925)** | **14** | **–** | **14** | ಡೆಪ್ಯೂಟಿ ಕಮಾಂಡೆಂಟ್‌ಗಳ ವೃಂದದಿಂದ ಮುಂಬಡ್ತಿ ಮೂಲಕ ಅಥವಾ ಐ.ಪಿ.ಎಸ್. ಅಧಿಕಾರಿಗಳನ್ನು ನಿಯುಕ್ತಿಗೊಳಿಸುವ ಮೂಲಕ. | ಡೆಪ್ಯೂಟಿ ಕಮಾಂಡೆಂಟ್‌ಗಳ ವೃಂದ ದಲ್ಲಿ ಮೂರು ವರ್ಷಗಳಿಗಿಂತ ಕಡಿಮೆ ಇಲ್ಲದಂತೆ ಸೇವೆಯನ್ನು ಸಲ್ಲಿಸಿರತಕ್ಕದ್ದು:<br>ಪರಂತು, ಮೂರು ವರ್ಷಗಳಿಗಿಂತ ಕಡಿಮೆ ಇಲ್ಲದಂತೆ ಸೇವೆಯನ್ನು ಸಲ್ಲಿಸಿರುವ ಅಧಿಕಾರಿಯು ಲಭ್ಯವಿಲ್ಲದಿದ್ದರೆ, ಒಂದು ವರ್ಷಕ್ಕಿಂತ ಕಡಿಮೆ ಇಲ್ಲದಂತೆ ಸೇವೆಯನ್ನು ಸಲ್ಲಿಸಿರುವ ಅಧಿಕಾರಿಯನ್ನು ಮುಂಬಡ್ತಿಗಾಗಿ ಪರಿಗಣಿಸಬಹುದು. |
| **6.** | **ಡೆಪ್ಯೂಟಿ ಕಮಾಂಡೆಂಟ್**<br>**(ರೂ.15200–25650)**<br>**ಟಿಪ್ಪಣಿ: 18150–26925 ರೂ.ಗಳ ವೇತನ ಶ್ರೇಣಿಯ ಡೆಪ್ಯೂಟಿ ಕಮಾಂಡೆಂಟ್/ ಅಡಿಷನಲ್ ಕಮಾಂಡೆಂಟ್ ಹುದ್ದೆಯನ್ನು ಹೊಂದಿರು ವವರು ನಿವೃತ್ತಿ ಹೊಂದಿದಾಗ/ಮೃತರಾದಾಗ ಅಥವಾ ಇತರ ಕಾರಣದಿಂದಾಗಿ ಆ ಹುದ್ದೆಗಳು ಖಾಲಿಯಾದಾಗ ಸದರಿ ಹುದ್ದೆಗಳು ಅಸ್ತಿತ್ವದಲ್ಲಿರುವುದು ರದ್ದಾಗತಕ್ಕದ್ದು.** | **07** | **–** | **07** | ಅಸಿಸ್ಟೆಂಟ್ ಕಮಾಂಡೆಂಟ್ ವೃಂದದಿಂದ ಮುಂಬಡ್ತಿ ಮೂಲಕ | ಅಸಿಸ್ಟೆಂಟ್ ಕಮಾಂಡೆಂಟ್ ವೃಂದದಲ್ಲಿ ಐದು ವರ್ಷಗಳಿಗೆ ಕಡಿಮೆ ಇಲ್ಲದಂತೆ ಸೇವೆಯನ್ನು ಸಲ್ಲಿಸಿರತಕ್ಕದ್ದು:<br>ಪರಂತು, ಐದು ವರ್ಷಗಳಿಗೆ ಕಡಿಮೆ ಇಲ್ಲದಂತೆ ಸೇವೆಯನ್ನು ಸಲ್ಲಿಸಿದ ಅಧಿಕಾರಿಯು ಲಭ್ಯವಿರದಿದ್ದಲ್ಲಿ, ಮೂರು ವರ್ಷಗಳಿಗಿಂತ ಕಡಿಮೆ ಇಲ್ಲದಂತೆ ಸೇವೆಯನ್ನು ಸಲ್ಲಿಸಿರುವ ಅಧಿಕಾರಿಯನ್ನು ಮುಂಬಡ್ತಿಗಾಗಿ ಪರಿಗಣಿಸಬಹುದು. |
| **7** | **ಅಸಿಸ್ಟೆಂಟ್ ಕಮಾಂಡೆಂಟ್**<br>**(ರೂ.14050–25050)** | **54** | **–** | **54** | ಶೇಕಡ ಮೂವತ್ತೂರು ಮೂರನೇ ಒಂದರಷ್ಟನ್ನು ನೇರ ನೇಮಕಾತಿ ಮೂಲಕ; ಮತ್ತು<br>ಶೇಕಡ ಅರವತ್ತಾರು ಮೂರನೇ ಎರಡರಷ್ಟನ್ನು ರಿಸರ್ವ್ ಪೊಲೀಸ್ ಇನ್ಸ್‌ಪೆಕ್ಟರ್ ವೃಂದದಿಂದ ಮುಂಬಡ್ತಿ ಮೂಲಕ.<br>**ನೇರ ನೇಮಕಾತಿ ಮೂಲಕ ಆಯ್ಕೆ ಮಾಡುವ ವಿಧಾನ:–**<br>ನೇರ ನೇಮಕಾತಿಯನ್ನು ಕರ್ನಾಟಕ ಗೆಜೆಟೆಡ್ ಪ್ರೊಬೇಷನರುಗಳ ನೇಮಕಾತಿ (ಸ್ಪರ್ಧಾತ್ಮಕ ಪರೀಕ್ಷೆಗಳ ಮೂಲಕ ನೇಮಕಾತಿ) ನಿಯಮಗಳು, 1997ರ ಕಾರ್ಯವಿಧಾನಕ್ಕೆ ಅನುಸಾರವಾಗಿ ಮಾಡತಕ್ಕದ್ದು. | **ನೇರ ನೇಮಕಾತಿಗಾಗಿ:–**<br>**I ವಯೋಮಿತಿ:–**<br>ಕರ್ನಾಟಕ ಸಿವಿಲ್ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು, 1977ರ 6ನೇ ನಿಯಮದಲ್ಲಿ ಏನೇ ಇದ್ದಾಗ್ಯೂ, ಇಪ್ಪತ್ತೊಂದು (21) ವರ್ಷ ವಯಸ್ಸು ಪೂರ್ಣಗೊಂಡಿರಬೇಕು. ಆದರೆ ಈ ಕೆಳಗಿನ ವಯಸ್ಸನ್ನು ಮೀರಿರಬಾರದು;<br>**(i)** ಪರಿಶಿಷ್ಟ ಜಾತಿಗಳು, ಪರಿಶಿಷ್ಟ ಪಂಗಡಗಳು ಅಥವಾ ಇತರೆ ಹಿಂದುಳಿದ ವರ್ಗಗಳಿಗೆ ಸೇರಿದವರಾಗಿದ್ದರೆ ಇಪ್ಪತ್ತೆಂಟು(28) ವರ್ಷಗಳು |

<table>
<tr><th>(1)</th><th>(2)</th><th>(3)</th><th>(4)</th><th>(5)</th><th>(6)</th><th>(7)</th></tr>
<tr><td></td><td></td><td></td><td></td><td></td>
<td>
ಮೇಲಿನ ನಿಯಮಗಳಡಿಯಲ್ಲಿ ಕೆ.ಪಿ.ಎಸ್.ಸಿ.ಯಿಂದ ಅಸಿಸ್ಟೆಂಟ್ ಕಮಾಂಡೆಂಟರ ಹುದ್ದೆಗೆ ಲಿಖಿತ ಪರೀಕ್ಷೆಯಲ್ಲಿ ಅರ್ಹರಾದ ಅಭ್ಯರ್ಥಿಗಳು ದೈಹಿಕ ಸಹನೆ ಪರೀಕ್ಷೆ ಮತ್ತು ದೈಹಿಕ ಗುಣಮಟ್ಟ ಪರೀಕ್ಷೆಗೆ ಹಾಜರಾಗತಕ್ಕದ್ದು.<br><br>
II . ದೈಹಿಕ ಸಹನೆ ಪರೀಕ್ಷೆ:<br><br>
ಪುರುಷ ಅಭ್ಯರ್ಥಿಗಳು 2 ಕಿ.ಮೀ. ಗಳನ್ನು 10 ನಿಮಿಷಗಳಲ್ಲಿ ಮತ್ತು ಮಹಿಳಾ ಅಭ್ಯರ್ಥಿಗಳು 400 ಮೀಟರುಗಳನ್ನು 2 ನಿಮಿಷಗಳಲ್ಲಿ ಓಡಬೇಕು.<br><br>
ದೈಹಿಕ ಗುಣಮಟ್ಟಗಳ ಪರೀಕ್ಷೆ ಮತ್ತು ದೈಹಿಕ ಸಹನೆ ಪರೀಕ್ಷೆಯಲ್ಲಿ ಅರ್ಹರಾದವರು ಮಾತ್ರ ಸಂದರ್ಶನಕ್ಕೆ ಹಾಜರಾಗಲು ಅರ್ಹರಾಗಿರತಕ್ಕದ್ದು.<br><br>
ದೈಹಿಕ ಗುಣಮಟ್ಟಗಳ ಪರೀಕ್ಷೆಗೆ ಅಥವಾ ದೈಹಿಕ ಸಹನೆ ಪರೀಕ್ಷೆಗೆ ಗೈರುಹಾಜರಾಗಿರುವ ಅಭ್ಯರ್ಥಿಗಳು ಅನರ್ಹರಾಗತಕ್ಕದ್ದು.<br><br>
ದೈಹಿಕ ಗುಣಮಟ್ಟಗಳ ಪರೀಕ್ಷೆ ಮತ್ತು ದೈಹಿಕ ಸಹನೆ ಪರೀಕ್ಷೆಯನ್ನು ನಡೆಸುವ ಉದ್ದೇಶಕ್ಕಾಗಿ ರಚಿಸಿದ ಸಮಿತಿಯು ಸದರಿ ಪರೀಕ್ಷೆಗಳನ್ನು ನಡೆಸತಕ್ಕದ್ದು.<br><br>
ಸಮಿತಿಯು ಈ ಕೆಳಕಂಡವರನ್ನು ಒಳಗೊಂಡಿರತಕ್ಕದ್ದು, ಎಂದರೆ:–<br><br>
(i) ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕೆ.ಎಸ್.ಆರ್.ಪಿ.<br>
– ಅಧ್ಯಕ್ಷರು<br><br>
(ii) ಡೆಪ್ಯೂಟಿ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕೆ.ಎಸ್.ಆರ್.ಪಿ.<br>
– ಸದಸ್ಯರು<br><br>
(iii) ಡೈರೆಕ್ಟರ್ ಜನರಲ್ ಮತ್ತು ಪೊಲೀಸ್ ಇನ್ಸ್‌ಪೆಕ್ಟರ್ ಜನರಲ್ ಅವರು ನಾಮನಿರ್ದೇಶಿಸಿದ ಒಬ್ಬರು ಕೆಎಸ್‌ಆರ್‌ಪಿ ಕಮಾಂಡೆಂಟ್<br>
– ಸದಸ್ಯ ಕಾರ್ಯದರ್ಶಿ
</td>
<td>
(ii) ಇತರರಾಗಿದ್ದರೆ ಇಪ್ಪತ್ತಾರು (26)ವರ್ಷಗಳು:<br><br>
ಪರಂತು ಸೇವೆಯಿಂದ ಬಿಡುಗಡೆ ಹೊಂದಿದ, ಸೇವಾ ಕಡಿತ ಅಥವಾ ಸೇವಾ ನಿವೃತ್ತಿಯ ಕಾರಣದಿಂದ ಬಿಡುಗಡೆಯಾದ ಮಾಜಿ ಸೈನಿಕ ಅಭ್ಯರ್ಥಿಗಳ ಪ್ರಕರಣದಲ್ಲಿ ವಯೋಮಿತಿಯು ಆತನು ಮಿಲಿಟರಿಯಲ್ಲಿ ಸಲ್ಲಿಸಿರುವ ಸೇವಾ ವರ್ಷಗಳ ಜೊತೆಗೆ ಮೂರು ವರ್ಷಗಳು ಹೆಚ್ಚಾಗಿರತಕ್ಕದ್ದು. ಆದಾಗ್ಯೂ, ಯಾರೇ ಮಾಜಿ ಸೈನಿಕನು ಸರ್ಕಾರದ ಯಾವುದೇ ಸೇವೆಯಲ್ಲಿ ಈ ಮೊದಲೇ ಈ ಸವಲತ್ತನ್ನು ಪಡೆದುಕೊಂಡಿದ್ದಲ್ಲಿ, ಈ ನಿಯಮಗಳ ಅಡಿಯಲ್ಲಿ ಪುನ: ಈ ಸೌಲಭ್ಯವನ್ನು ಪಡೆಯಲು ಅರ್ಹನಾಗಿರತಕ್ಕದ್ದಲ್ಲ.<br><br>
III. ದೈಹಿಕ ಗುಣಮಟ್ಟಗಳ ಪರೀಕ್ಷೆ:–<br><br>
ದೈಹಿಕ ಗುಣಮಟ್ಟದ ಪರೀಕ್ಷೆಯು ಈ ಕೆಳಗಿನಂತಿರತಕ್ಕದ್ದು :<br><br>
(ಎ) ಪುರುಷರಿಗೆ:–<br><br>
(ಎ) ಎತ್ತರ:– 168 ಸೆಂ.ಮೀ.ಗಿಂತ ಕಡಿಮೆ ಇರತಕ್ಕದ್ದಲ್ಲ (ಮಾಜಿ ಸೈನಿಕ ಅಭ್ಯರ್ಥಿಗಳಿಗೆ ಇದು ಅನ್ವಯಿಸುವುದಿಲ್ಲ).<br><br>
(ಬಿ) ಎದೆ:– ಕನಿಷ್ಠ 5 ಸೆಂ.ಮೀ.ಗಳ ಹಿಗ್ಗಿಸುವಿಕೆಯ ಜೊತೆಗೆ ಪೂರ್ಣವಾಗಿ ಹಿಗ್ಗಿಸಿದಾಗ 86 ಸೆಂ.ಮೀ.ಗಳಿಗಿಂತ ಕಡಿಮೆ ಇರತಕ್ಕದ್ದಲ್ಲ.<br><br>
(ಬಿ) ಮಹಿಳೆಯರಿಗೆ:–<br><br>
(ಎ) ಎತ್ತರ:– 157 ಸೆಂ.ಮೀ.ಗಿಂತ ಕಡಿಮೆ ಇರತಕ್ಕದ್ದಲ್ಲ<br><br>
(ಬಿ) ತೂಕ:– 45 ಕೆ.ಜಿ.ಗಳಿಗಿಂತ ಕಡಿಮೆ ಇರತಕ್ಕದ್ದಲ್ಲ.<br><br>
(ಸಿ) ದೃಷ್ಟಿ:– ಕನ್ನಡಕ ಸಹಿತ ಅಥವಾ ಕನ್ನಡಕ ಇಲ್ಲದೆ ದೂರದ ಮತ್ತು ಸಮೀಪದ ದೃಷ್ಟಿಯನ್ನು ಈ ಕೆಳಗಿನ ಪ್ರಮಾಣದಲ್ಲಿ ಹೊಂದಿರಲೇಬೇಕು:<br><br>
(i) ದೂರದೃಷ್ಟಿ:–<br>
<table>
<tr><td>ಉತ್ತಮ ಕಣ್ಣು</td><td>ದೋಷಯುಕ್ತ ಕಣ್ಣು</td></tr>
<tr><td>6 / 9</td><td>6 / 9</td></tr>
<tr><td>6 / 9</td><td>6 / 12</td></tr>
</table>
</td></tr>
</table>

<table>
<tr><th>(1)</th><th>(2)</th><th>(3)</th><th>(4)</th><th>(5)</th><th>(6)</th><th>(7)</th></tr>
<tr><td></td><td></td><td></td><td></td><td></td>
<td>ಸಮಿತಿಯು ದೈಹಿಕ ಗುಣಮಟ್ಟಗಳ ಪರೀಕ್ಷೆ ಮತ್ತು ದೈಹಿಕ ಸಹನೆ ಪರೀಕ್ಷೆಯನ್ನು ನಡೆಸತಕ್ಕದ್ದು ಮತ್ತು ಅದರ ಫಲಿತಾಂಶಗಳನ್ನು ಕರ್ನಾಟಕ ಲೋಕಸೇವಾ ಆಯೋಗಕ್ಕೆ ಸಲ್ಲಿಸತಕ್ಕದ್ದು.<br><br>ಸಮಿತಿಯು ದೈಹಿಕ ಗುಣಮಟ್ಟಗಳ ಪರೀಕ್ಷೆ ಮತ್ತು ದೈಹಿಕ ಸಹನೆ ಪರೀಕ್ಷೆಯನ್ನು ನಡೆಸುವ ದಿನಾಂಕ, ಸಮಯ ಮತ್ತು ಸ್ಥಳವನ್ನು ಪ್ರಕಟಿಸತಕ್ಕದ್ದು.</td>
<td>(ii) ಸಮೀಪ ದೃಷ್ಟಿ:–
<table>
<tr><td>ಉತ್ತಮ ಕಣ್ಣು</td><td>ದೋಷಯುಕ್ತ ಕಣ್ಣು</td></tr>
<tr><td>0 / 6</td><td>0 / 8</td></tr>
</table>
(iii) ಪ್ರತಿ ಕಣ್ಣು ಸಂಪೂರ್ಣ ಕ್ಷೇತ್ರದೃಷ್ಟಿ ಹೊಂದಿರಲೇಬೇಕು.<br><br>ಬಣ್ಣ ಕುರುಡು, ಮೆಳ್ಳಗಣ್ಣು ಅಥವಾ ರೋಗಗ್ರಸ್ತವಾದ ಯಾವುದೇ ಕಣ್ಣುಗಳು ಅಥವಾ ಯಾವುದೇ ಕಣ್ಣಿನ ರೆಪ್ಪೆಗಳು ಇದ್ದರೆ ಅದನ್ನು ಅನರ್ಹತೆ ಎಂದು ಪರಿಗಣಿಸತಕ್ಕದ್ದು.<br><br>(ಡಿ) ಶ್ರವಣ ಪರೀಕ್ಷೆ :–<br><br>(i) ರಿನ್ನೆಸ್ ಟೆಸ್ಟ್<br>(ii) ವೆಬ್ಬರ್ಸ್ ಟೆಸ್ಟ್<br>(iii) ಟೆಸ್ಟ್ ಫಾರ್ ವೆರ್ಟಿಗೊ<br>ಮೇಲೆ ನಮೂದಿಸಿದ ಪರೀಕ್ಷೆಗಳ ಸಂದರ್ಭದಲ್ಲಿ ಯಾವುದೇ ನ್ಯೂನತೆಗಳು ಕಂಡುಬಂದಲ್ಲಿ ಅದನ್ನು ಅನರ್ಹತೆ ಎಂದು ಪರಿಗಣಿಸತಕ್ಕದ್ದು.<br><br>ಈ ಕೆಳಗಿನ ಯಾವುದೇ ನ್ಯೂನತೆಗಳು ದೈಹಿಕ ಅನರ್ಹತೆಯಾಗತಕ್ಕದ್ದು.<br><br>(i) ತಾಕು ಮಂಡಿಗಳು<br>(ii) ಬಿಲ್ಲು ಕಾಲುಗಳು<br>(iii) ಚಪ್ಪಟೆ ಪಾದ<br>(iv) ಗಂಟು ನರಗಳು<br>(v) ಮಾತಿನಲ್ಲಿ ಉಗ್ಗು<br>(ಇ) ಎದೆಯ ಎಕ್ಸರೆಯನ್ನು ಪರೀಕ್ಷೆಗಾಗಿ ತೆಗೆದುಕೊಳ್ಳತಕ್ಕದ್ದು.<br>ಮೇಲಿನ ಎಲ್ಲಾ ಪರೀಕ್ಷೆಗಳನ್ನು ವೈದ್ಯಕೀಯ ಮಂಡಳಿಯು ನಡೆಸತಕ್ಕದ್ದು. ವೈದ್ಯಕೀಯ ಮಂಡಳಿಯು ದೈಹಿಕವಾಗಿ ಅರ್ಹ ಎಂದು ಪ್ರಮಾಣೀಕರಿಸಿದ ಅಭ್ಯರ್ಥಿಗಳನ್ನು ಮಾತ್ರ ನೇಮಕಾತಿಗಾಗಿ ಪರಿಗಣಿಸತಕ್ಕದ್ದು.</td></tr>
</table>

| (1) | (2) | (3) | (4) | (5) | (6) | (7) |
|---|---|---|---|---|---|---|
| | | | | | | **IV. ತರಬೇತಿ:–**<br><br>ಸೇರಿದ ನಂತರ, ಅಭ್ಯರ್ಥಿಯು ಡಿಜಿ ಮತ್ತು ಐಜಿಪಿಯವರು ಕಾಲಕಾಲಕ್ಕೆ ನಿಗದಿಪಡಿಸುವ ತರಬೇತಿ ಪಡೆಯತಕ್ಕದ್ದು. ಅವನು ತರಬೇತಿಯನ್ನು ಯಶಸ್ವಿಯಾಗಿ ಪೂರ್ಣಗೊಳಿಸದಿದ್ದರೆ ಅವನು ಸೇವೆಯಿಂದ ವಜಾಗೊಳ್ಳುವುದಕ್ಕೆ ಗುರಿಯಾಗತಕ್ಕದ್ದು.<br><br>**ಮುಂಬಡ್ತಿಗಾಗಿ:–**<br><br>ಕರ್ನಾಟಕ ರಾಜ್ಯ ಮೀಸಲು ಪೊಲೀಸಿನಲ್ಲಿ ರಿಸರ್ವ್ ಪೊಲೀಸ್ ಇನ್ಸ್‌ಪೆಕ್ಟರ್ ವೃಂದದಲ್ಲಿ ಐದು ವರ್ಷಗಳಿಗೆ ಕಡಿಮೆ ಇಲ್ಲದಂತೆ ಸೇವೆಯನ್ನು ಸಲ್ಲಿಸಿರಬೇಕು:<br><br>ಪರಂತು, ಐದು ವರ್ಷಗಳಿಗಿಂತ ಕಡಿಮೆ ಇಲ್ಲದಂತೆ ಸೇವೆಯನ್ನು ಸಲ್ಲಿಸಿದ ಅಧಿಕಾರಿ ಲಭ್ಯವಿರದಿದ್ದಲ್ಲಿ, ಮೂರು ವರ್ಷಗಳಿಗಿಂತ ಕಡಿಮೆ ಇಲ್ಲದಂತೆ ಸೇವೆಯನ್ನು ಸಲ್ಲಿಸಿರುವ ಅಧಿಕಾರಿಯನ್ನು ಮುಂಬಡ್ತಿಗಾಗಿ ಪರಿಗಣಿಸಬಹುದು. |
| **8.** | **ಸ್ಪೆಷಲ್ ರಿಸರ್ವ್ ಪೊಲೀಸ್ ಇನ್ಸ್‌ಪೆಕ್ಟರ್ (ಪುರುಷ)**<br>**ಮತ್ತು**<br>**ಸ್ಪೆಷಲ್ ರಿಸರ್ವ್ ಪೊಲೀಸ್ ಇನ್ಸ್‌ಪೆಕ್ಟರ್ (ಮಹಿಳೆ)**<br>**(ರೂ. 10800–20025)**<br>**ಪುರುಷ**<br>**ಮಹಿಳೆ** | **109**<br>**02** | **–**<br>**–** | **109**<br>**02** | ಸ್ಪೆಷಲ್ ರಿಸರ್ವ್ ಪೊಲೀಸ್ ಸಬ್ ಇನ್ಸ್‌ಪೆಕ್ಟರ್‌ಗಳ (ಪುರುಷ) ಮತ್ತು ಸ್ಪೆಷಲ್ ರಿಸರ್ವ್ ಪೊಲೀಸ್ ಸಬ್ ಇನ್ಸ್‌ಪೆಕ್ಟರ್‌ಗಳ (ಮಹಿಳೆ) ವೃಂದಗಳಿಂದ ಸಂಯೋಜಿತ ಜೇಷ್ಠತೆಯ ಆಧಾರದ ಮೇರೆಗೆ ಮುಂಬಡ್ತಿ ಮೂಲಕ. | ಕರ್ನಾಟಕ ರಾಜ್ಯ ರಿಸರ್ವ್ ಪೊಲೀಸ್ ದಳದಲ್ಲಿ, ಸಂದರ್ಭಾನುಸಾರ, ಸ್ಪೆಷಲ್ ರಿಸರ್ವ್ ಪೊಲೀಸ್ ಸಬ್ ಇನ್ಸ್‌ಪೆಕ್ಟರ್‌ಗಳ (ಪುರುಷ), ಸ್ಪೆಷಲ್ ರಿಸರ್ವ್ ಪೊಲೀಸ್ ಸಬ್ ಇನ್ಸ್‌ಪೆಕ್ಟರ್‌ಗಳ (ಮಹಿಳೆ) ವೃಂದಗಳಲ್ಲಿ ಐದು ವರ್ಷಗಳಿಗೆ ಕಡಿಮೆ ಇಲ್ಲದಂತೆ ಸೇವೆಯನ್ನು ಸಲ್ಲಿಸಿರಬೇಕು:<br>ಪರಂತು, ಐದು ವರ್ಷಗಳಿಗಿಂತ ಕಡಿಮೆ ಇಲ್ಲದಂತೆ ಸೇವೆಯನ್ನು ಸಲ್ಲಿಸಿದ ಅಧಿಕಾರಿಗಳು ಲಭ್ಯವಿರದಿದ್ದಲ್ಲಿ, ಮೂರು ವರ್ಷಗಳಿ ಗಿಂತ ಕಡಿಮೆ ಇಲ್ಲದಂತೆ ಸೇವೆಯನ್ನು ಸಲ್ಲಿಸಿರುವ ಅಧಿಕಾರಿಗಳನ್ನು ಮುಂಬಡ್ತಿಗಾಗಿ ಪರಿಗಣಿಸಬಹುದು. |
| **9.** | **ಸ್ಪೆಷಲ್ ರಿಸರ್ವ್ ಪೊಲೀಸ್ ಸಬ್ ಇನ್ಸ್‌ಪೆಕ್ಟರ್ (ಪುರುಷ)**<br>**(ರೂ.10000–18150)** | **284** | **–** | **284** | ಶೇಕಡ ಅರವತ್ತರಷ್ಟು ನೇರ–ನೇಮಕಾತಿ ಮೂಲಕ; ಮತ್ತು ಅಸಿಸ್ಟೆಂಟ್ ರಿಸರ್ವ್ ಸಬ್ ಇನ್ಸ್‌ಪೆಕ್ಟರುಗಳು/ಹೆಡ್ ಕಾನ್ಸ್‌ಟೇಬಲ್‌ಗಳು/ಪೊಲೀಸ್ ಕಾನ್ಸ್‌ಟೇಬಲ್‌ಗಳ ವೃಂದಗಳಿಂದ ಅಥವಾ ಕರ್ನಾಟಕ ರಾಜ್ಯ ಪೊಲೀಸಿನ ಯಾವುದೇ ವಿಭಾಗದ ತತ್ಸಮಾನ ವೃಂದಗಳಿಂದ ಸೇವೆಯಲ್ಲಿರುವ ಅಭ್ಯರ್ಥಿಗಳ ಪೈಕಿ ಶೇಕಡ ಹತ್ತರಷ್ಟು ನೇರ ನೇಮಕಾತಿ ಮೂಲಕ | **I. ನೇರ ನೇಮಕಾತಿಗಾಗಿ:–**<br><br>**(ಎ) ವಯೋಮಿತಿ:–**<br><br>ಕರ್ನಾಟಕ ಸಿವಿಲ್ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು, 1977ರ 6ನೇ ನಿಯಮದಲ್ಲಿ ಏನೇ ಇದ್ದಾಗ್ಯೂ, ಇಪ್ಪತ್ತೊಂದು ವರ್ಷಗಳ ವಯಸ್ಸು ಪೂರ್ಣಗೊಂಡಿರಬೇಕು,. ಆದರೆ ಈ ಕೆಳಗಿನ ಸಂದರ್ಭಗಳಲ್ಲಿ,– |

| (1) | (2) | (3) | (4) | (5) | (6) | (7) |
|---|---|---|---|---|---|---|
| | | | | | ಶೇಕಡ ಮೂವತ್ತರಷ್ಟು ಅಸಿಸ್ಟೆಂಟ್ ರಿಸರ್ವ್ ಸಬ್ ಇನ್ಸ್‌ಪೆಕ್ಟರುಗಳ ವೃಂದದಿಂದ ಮುಂಬಡ್ತಿ ಮೂಲಕ.<br><br>**ನೇರ ನೇಮಕಾತಿಗೆ ಆಯ್ಕೆ ವಿಧಾನ:–**<br><br>ನೇರ ನೇಮಕಾತಿಯನ್ನು ಆಯ್ಕೆ ಪ್ರಾಧಿಕಾರವು ಮಾಡತಕ್ಕದ್ದು.<br><br>ಆಯ್ಕೆ ಪ್ರಾಧಿಕಾರವು ಅಧಿಕೃತ ರಾಜ್ಯ ಪತ್ರದಲ್ಲಿ ಅಧಿಸೂಚನೆ ಹೊರಡಿಸುವ ಮೂಲಕ, ರಾಜ್ಯವ್ಯಾಪಿ ಪ್ರಸಾರವುಳ್ಳ ಒಂದು ಕನ್ನಡ ಭಾಷೆಯ ಮತ್ತು ಒಂದು ಇಂಗ್ಲೀಷ್ ಭಾಷೆಯ ದಿನಪತ್ರಿಕೆಯಲ್ಲಿ, ಹೀಗೆ ಎರಡು ದಿನ ಪತ್ರಿಕೆಗಳಲ್ಲಿ ಜಾಹೀರಾತು ನೀಡುವ ಮೂಲಕ ಮತ್ತು ಅಂತರ್‌ಜಾಲ ಮತ್ತು ವಿದ್ಯುನ್ಮಾನ ಮಾಧ್ಯಮದ ಮೂಲಕ ವ್ಯಾಪಕ ಪ್ರಚಾರ ನೀಡತಕ್ಕದ್ದು ಮತ್ತು ಈ ನಿಯಮಗಳ ಅಡಿಯಲ್ಲಿ ನೇಮಕಾತಿಯ ಉದ್ದೇಶಕ್ಕಾಗಿ ಅದು ನಿಗದಿಪಡಿಸಬಹುದಾದ ನಮೂನೆಯಲ್ಲಿ ಎಲ್ಲ ಅರ್ಹ ಪುರುಷ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸತಕ್ಕದ್ದು.<br><br>ಸೇವೆಯಲ್ಲಿ ಇರುವ ಅಭ್ಯರ್ಥಿಗಳನ್ನೂ ಒಳಗೊಂಡಂತೆ ನೇರ ನೇಮಕಾತಿಯನ್ನು ಈ ಕೆಳಗಿನವರನ್ನು ಒಳಗೊಂಡ ಆಯ್ಕೆ ಪ್ರಾಧಿಕಾರವು ಮಾಡತಕ್ಕದ್ದು:–<br><br>(1)ನೇಮಕಾತಿ ಪ್ರಭಾರದಲ್ಲಿರುವ ಅಡಿಷನಲ್ ಡೈರೆಕ್ಟರ್ ಜನರಲ್ ಆಫ್ ಪೊಲೀಸ್<br>– ಅಧ್ಯಕ್ಷರು<br>(2) ಅಡಿಷನಲ್ ಡೈರೆಕ್ಟರ್ ಜನರಲ್ ಆಫ್ ಪೊಲೀಸ್, ಕೆ.ಎಸ್.ಆರ್.ಪಿ.<br>– ಸದಸ್ಯರು<br>(3) ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕೆ.ಎಸ್.ಆರ್.ಪಿ.<br>– ಸದಸ್ಯರು<br>(4) ಕಾನೂನುಬದ್ಧವಾಗಿ ಸ್ಥಾಪಿತವಾದ ವಿಶ್ವವಿದ್ಯಾನಿಲಯದ ರೀಡರ್/ಸಹ ಪ್ರಾಧ್ಯಾಪಕ ದರ್ಜೆಗಿಂತ ಕಡಿಮೆ ಇಲ್ಲದ ದರ್ಜೆಯ ಒಬ್ಬ ಸಾಮಾಜಿಕ ಮನಶಾಸ್ತ್ರಜ್ಞರು (ಅಧ್ಯಕ್ಷರಿಂದ ನಾಮನಿರ್ದೇಶಿತರಾದವರು)<br>– ಸದಸ್ಯರು | **(i)** ಪರಿಶಿಷ್ಟ ಜಾತಿಗಳು, ಪರಿಶಿಷ್ಟ ಪಂಗಡಗಳು ಅಥವಾ ಇತರೆ ಹಿಂದುಳಿದ ವರ್ಗಗಳ ಪ್ರಕರಣಗಳಲ್ಲಿ ಇಪ್ಪತ್ತೆಂಟು ವರ್ಷಗಳು,<br><br>**(ii)** ಇತರರ ಪ್ರಕರಣಗಳಲ್ಲಿ ಇಪ್ಪತ್ತಾರು ವರ್ಷಗಳು ಪೂರ್ಣಗೊಂಡಿರಬಾರದು:<br><br>ಪರಂತು ಸೇವೆಯಿಂದ ಬಿಡುಗಡೆ ಹೊಂದಿದ, ಸೇವಾ ಕಡಿತ ಅಥವಾ ಸೇವಾ ನಿವೃತ್ತಿ ಕಾರಣದಿಂದ ಬಿಡುಗಡೆಯಾದ ಮಾಜಿ ಸೈನಿಕ ಅಭ್ಯರ್ಥಿಗಳ ಪ್ರಕರಣದಲ್ಲಿ, ವಯೋಮಿತಿಯು ಆತನು ಮಿಲಿಟರಿಯಲ್ಲಿ ಸಲ್ಲಿಸಿರುವ ಸೇವಾ ವರ್ಷಗಳ ಜೊತೆಗೆ ಮೂರು ವರ್ಷಗಳು ಹೆಚ್ಚಾಗಿರತಕ್ಕದ್ದು. ಆದಾಗ್ಯೂ, ಯಾರೇ ಮಾಜಿ ಸೈನಿಕನು ಸರ್ಕಾರದ ಯಾವುದೇ ಸೇವೆಯಲ್ಲಿ ಈ ಮೊದಲೇ ಈ ಸವಲತ್ತನ್ನು ಪಡೆದುಕೊಂಡಿದ್ದಲ್ಲಿ, ಈ ನಿಯಮಗಳ ಅಡಿಯಲ್ಲಿ ಪುನ: ಈ ಸೌಲಭ್ಯವನ್ನು ಪಡೆಯಲು ಅರ್ಹನಾಗಿರತಕ್ಕದ್ದಲ್ಲ.<br><br>**(ಬಿ) ಸೇವೆಯಲ್ಲಿ ಇರುವವರು:–**<br><br>ಈ ಕೆಳಗಿನ ವಯಸ್ಸನ್ನು ಮೀರಿರಬಾರದು:–<br><br>**(i)** ಪರಿಶಿಷ್ಟ ಜಾತಿಗಳು, ಪರಿಶಿಷ್ಟ ಪಂಗಡಗಳು ಅಥವಾ ಇತರೆ ಹಿಂದುಳಿದ ವರ್ಗಗಳಿಗೆ ಸೇರಿದ ಅಭ್ಯರ್ಥಿಗಳ ಪ್ರಕರಣಗಳಲ್ಲಿ ನಲವತ್ತು ವರ್ಷಗಳು<br><br>**(ii)** ಇತರರ ಪ್ರಕರಣಗಳಲ್ಲಿ ಮೂವತ್ತೈದು ವರ್ಷಗಳು.<br><br>**II. ಶೈಕ್ಷಣಿಕ ವಿದ್ಯಾರ್ಹತೆ:–**<br><br>ನೇರ ನೇಮಕಾತಿ ಮತ್ತು ಸೇವೆಯಲ್ಲಿ ಇರುವ ಅಭ್ಯರ್ಥಿಗಳಿಗಾಗಿ:–<br><br>ಅಂಗೀಕೃತ ವಿಶ್ವವಿದ್ಯಾನಿಲಯದಿಂದ ಪಡೆದ ಒಂದು ಪದವಿಯನ್ನು ಅಥವಾ ತತ್ಸಮಾನ ವಿದ್ಯಾರ್ಹತೆಯನ್ನು ಹೊಂದಿರಬೇಕು. |

| (1) | (2) | (3) | (4) | (5) | (6) | (7) |
|---|---|---|---|---|---|---|
| | | | | | (5) ಸಮಾಜ ಕಲ್ಯಾಣ ಇಲಾಖೆಯ ನಿರ್ದೇಶಕರು ಅಥವಾ ಅವರಿಂದ ನಾಮ ನಿರ್ದೇಶನಗೊಂಡ ಸಮಾಜಕಲ್ಯಾಣ ಜಂಟಿ ನಿರ್ದೇಶಕರ ದರ್ಜೆಗೆ ಕಡಿಮೆ ಇಲ್ಲದ ದರ್ಜೆಯ ಅಧಿಕಾರಿ.<br>– ಸದಸ್ಯರು<br>(6) ಹಿಂದುಳಿದ ವರ್ಗಗಳ ನಿರ್ದೇಶಕರು ಅಥವಾ ಅವರಿಂದ ನಾಮನಿರ್ದೇಶನಗೊಂಡ ಹಿಂದುಳಿದ ವರ್ಗಗಳ ಜಂಟಿ ನಿರ್ದೇಶಕರ ದರ್ಜೆಗೆ ಕಡಿಮೆ ಇಲ್ಲದ ದರ್ಜೆಯ ಅಧಿಕಾರಿ.<br>– ಸದಸ್ಯರು<br>(7) ಅಲ್ಪ ಸಂಖ್ಯಾತರ ಕಲ್ಯಾಣ ಇಲಾಖೆಯ ನಿರ್ದೇಶಕರು ಅಥವಾ ಅವರಿಂದ ನಾಮನಿರ್ದೇಶಿತರಾದ ಅಲ್ಪ ಸಂಖ್ಯಾತರ ಕಲ್ಯಾಣ ಇಲಾಖೆಯ ಜಂಟಿ ನಿರ್ದೇಶಕರ ದರ್ಜೆಗಿಂತ ಕಡಿಮೆ ಇಲ್ಲದ ದರ್ಜೆಯ ಒಬ್ಬ ಅಧಿಕಾರಿ.<br>– ಸದಸ್ಯರು<br>(8) ಸಂದರ್ಭಾನುಸಾರ, ನೇಮಕಾತಿ ಪ್ರಭಾರದಲ್ಲಿರುವ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ / ಡೆಪ್ಯೂಟಿ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್<br>– ಸದಸ್ಯ ಕಾರ್ಯದರ್ಶಿ<br>ಪರಂತು, ಇಂಡಿಯಾ ರಿಸರ್ವ್ ಬೆಟಾಲಿಯನ್‌ಗೆ ನೇಮಕಾತಿ ಮಾಡುವುದಕ್ಕೆ ಸಂಬಂಧಿಸಿದಂತೆ, ಆಯ್ಕೆ ಸಮಿತಿಯ ಮೇಲ್ಕಂಡ ಸದಸ್ಯರ ಜೊತೆಗೆ ಕೇಂದ್ರ ಪೊಲೀಸ್ ದಳದ ಕಮಾಂಡೆಂಟರ ದರ್ಜೆಗಿಂತ ಕಡಿಮೆಯಲ್ಲದ ದರ್ಜೆಯ ಒಬ್ಬ ಅಧಿಕಾರಿ ಇರತಕ್ಕದ್ದು.<br>ಆಯ್ಕೆ ಪ್ರಾಧಿಕಾರವು ದೈಹಿಕ ಗುಣಮಟ್ಟಗಳ ಪರೀಕ್ಷೆ, ದೈಹಿಕ ಸಹನೆ ಪರೀಕ್ಷೆ, ಮತ್ತು ಲಿಖಿತ ಪರೀಕ್ಷೆಗಳನ್ನು ನಡೆಸುವ ದಿನಾಂಕ, ಸಮಯ ಮತ್ತು ಸ್ಥಳವನ್ನು ಪ್ರಕಟಿಸತಕ್ಕದ್ದು.<br>ಆಯ್ಕೆಯನ್ನು ಕೆಳಕಾಣಿಸಿದ ಪರೀಕ್ಷೆಗಳ ಆಧಾರದ ಮೇಲೆ ನಿರ್ಧರಿಸಿದ ಅರ್ಹತೆಯ ಮೇಲೆ ಮಾಡತಕ್ಕದ್ದು:–<br>**ದೈಹಿಕ ಸಹನೆ ಪರೀಕ್ಷೆ:–**<br>ಅಭ್ಯರ್ಥಿಗಳು ಮೊದಲು ದೈಹಿಕ ಸಹನೆ ಪರೀಕ್ಷೆಗೆ ಹಾಜರಾಗತಕ್ಕದ್ದು. ದೈಹಿಕ ಸಹನೆ ಪರೀಕ್ಷೆಯು ಕೇವಲ ಅರ್ಹತಾ | **III. ದೈಹಿಕ ಸಹನೆ ಪರೀಕ್ಷೆ:**<br>**(ಎ) ನೇರ ನೇಮಕಾತಿಗೆ:–**<br>(i)ಅಭ್ಯರ್ಥಿಗಳು ಹತ್ತು ನಿಮಿಷಗಳಲ್ಲಿ ಎರಡು ಕಿ.ಮೀ.ಗಳನ್ನು ಓಡಬೇಕು.<br>(ii) **ಉದ್ದ ಜಿಗಿತ ಅಥವಾ ಎತ್ತರ ಜಿಗಿತ**<br>**ಉದ್ದ ಜಿಗಿತ–** 3.8 ಮೀಟರುಗಳಿಗಿಂತ ಕಡಿಮೆ ಇಲ್ಲದಷ್ಟು.<br>**ಎತ್ತರ ಜಿಗಿತ–** 1.2 ಮೀಟರುಗಳಿಗಿಂತ ಕಡಿಮೆ ಇಲ್ಲದಷ್ಟು ಅಭ್ಯರ್ಥಿಗಳು ಯಾವುದೇ ಒಂದು ಜಿಗಿತವನ್ನು ಅಥವಾ ಎರಡೂ ಜಿಗಿತಗಳನ್ನು ಮಾಡಲು ಆಯ್ಕೆ ಮಾಡಿಕೊಳ್ಳಬಹುದು. ಆದರೆ, ಅವರು ಅವುಗಳ ಪೈಕಿ ಕೊನೇ ಪಕ್ಷ ಯಾವುದಾದರೂ ಒಂದರಲ್ಲಿ ಅರ್ಹತೆ ಗಳಿಸಬೇಕು (ಗರಿಷ್ಠ 3 ಅವಕಾಶಗಳಲ್ಲಿ)<br>(iii) **ಗುಂಡು ಎಸೆತ** (7.26 ಕಿ.ಗ್ರಾಂ) 5.60 ಮೀಟರುಗಳಿಗೆ ಕಡಿಮೆ ಇಲ್ಲದಷ್ಟು.<br>**(ಬಿ) ಸೇವೆಯಲ್ಲಿರುವ ಅಭ್ಯರ್ಥಿಗಳು:**<br>(i) ಅಭ್ಯರ್ಥಿಗಳು ನಾಲ್ಕು ನಿಮಿಷಗಳಲ್ಲಿ ಒಂದು ಕಿ. ಮೀಟರನ್ನು ಓಡಬೇಕು.<br>(ii) **ಉದ್ದ ಜಿಗಿತ ಅಥವಾ ಎತ್ತರ ಜಿಗಿತ:**<br>**ಉದ್ದ ಜಿಗಿತ–** 3.20ಮೀಟರುಗಳಿಗೆ ಕಡಿಮೆ ಇಲ್ಲದಷ್ಟು<br>**ಎತ್ತರ ಜಿಗಿತ–** 1 ಮೀಟರಿಗೆ ಕಡಿಮೆ ಇಲ್ಲದಷ್ಟು<br>ಅಭ್ಯರ್ಥಿಗಳು ಯಾವುದೇ ಒಂದು ಜಿಗಿತವನ್ನು ಅಥವಾ ಎರಡೂ ಜಿಗಿತಗಳನ್ನು ಮಾಡಲು ಆಯ್ಕೆ ಮಾಡಿಕೊಳ್ಳಬಹುದು. ಆದರೆ, ಅವರು ಅವುಗಳ ಪೈಕಿ ಕೊನೇ ಪಕ್ಷ ಯಾವುದಾದರೂ ಒಂದರಲ್ಲಿ ಅರ್ಹತೆ ಗಳಿಸಬೇಕು (ಗರಿಷ್ಠ 3 ಅವಕಾಶಗಳಲ್ಲಿ)<br>(iii) **ಗುಂಡು ಎಸೆತ:** (7.26ಕಿ. ಗ್ರಾಂ): 4.5 ಮೀಟರುಗಳಿಗಿಂತ ಕಡಿಮೆ ಇಲ್ಲದಷ್ಟು. |

| (1) | (2) | (3) | (4) | (5) | (6) | (7) |
|---|---|---|---|---|---|---|
| | | | | | ಪರೀಕ್ಷೆಯಾಗಿರುತ್ತದೆ. ದೈಹಿಕ ಸಹನೆ ಪರೀಕ್ಷೆಯಲ್ಲಿ ಅರ್ಹರಾದವರು ಮಾತ್ರ ದೈಹಿಕ ಗುಣಮಟ್ಟಗಳ ಪರೀಕ್ಷೆಗೆ ಹಾಜರಾಗತಕ್ಕದ್ದು.<br><br>**ದೈಹಿಕ ಗುಣಮಟ್ಟಗಳ ಪರೀಕ್ಷೆ:–**<br><br>ದೈಹಿಕ ಸಹನೆ ಪರೀಕ್ಷೆಯಲ್ಲಿ ಅರ್ಹರಾದವರು ಮಾತ್ರ ದೈಹಿಕ ಗುಣಮಟ್ಟದ ಪರೀಕ್ಷೆಗೆ ಹಾಜರಾಗತಕ್ಕದ್ದು. ನಿಗದಿಪಡಿಸಲಾದ ದೈಹಿಕ ಗುಣಮಟ್ಟಗಳನ್ನು ಹೊಂದಿಲ್ಲದವರನ್ನು ಅನರ್ಹಗೊಳಿಸತಕ್ಕದ್ದು.<br><br>ದೈಹಿಕ ಸಹನೆ ಪರೀಕ್ಷೆಯನ್ನು ಮತ್ತು ದೈಹಿಕ ಗುಣ ಮಟ್ಟ ಪರೀಕ್ಷೆಯನ್ನು ಪೊಲೀಸ್ ಇನ್ಸ್‌ಪೆಕ್ಟರ್ ಜನರಲ್, ಕೆಎಸ್‌ಆರ್‌ಪಿ (ಅಧ್ಯಕ್ಷರು) ಮತ್ತು ಡಿಜಿ ಮತ್ತು ಐಜಿಪಿ ಅವರು ನಾಮ ನಿರ್ದೇಶಿಸಿದ ಕೆ ಎಸ್ ಆರ್ ಪಿ ಕಮಾಂಡೆಂಟರ ದರ್ಜೆಯ ಇಬ್ಬರು ಅಧಿಕಾರಿಗಳನ್ನು (ಸದಸ್ಯರು) ಒಳಗೊಂಡಿರುವ ಸಮಿತಿಯು ನಡೆಸತಕ್ಕದ್ದು.<br><br>ಒಬ್ಬ ಅಭ್ಯರ್ಥಿಯು ಒಂದಕ್ಕಿಂತ ಹೆಚ್ಚು ಕೇಂದ್ರಗಳಲ್ಲಿ ದೈಹಿಕ ಸಹನೆ ಪರೀಕ್ಷೆಗೆ ಮತ್ತು ದೈಹಿಕ ಗುಣ ಮಟ್ಟ ಪರೀಕ್ಷೆಗೆ ಹಾಜರಾಗಲು ಪ್ರಯತ್ನಿಸಿದರೆ ಅದನ್ನು ಅನರ್ಹತೆ ಎಂದು ಪರಿಗಣಿಸಲಾಗುವುದು.<br><br>**ಟಿಪ್ಪಣಿ (1):–** ಈ ಮುಂದಿನ ಎರಡು ಪರೀಕ್ಷೆಗಳಿಗೆ, ಎಂದರೆ– ದೈಹಿಕ ಸಹನೆ, ದೈಹಿಕ ಗುಣಮಟ್ಟಗಳ ಪರೀಕ್ಷೆಗಳಿಗೆ ಗೈರು ಹಾಜರಾಗುವ ಅಭ್ಯರ್ಥಿಗಳನ್ನು ಅನರ್ಹಗೊಳಿಸತಕ್ಕದ್ದು.<br><br>**ಟಿಪ್ಪಣಿ(2):–** ದೈಹಿಕ ಸಹನೆ ಮತ್ತು ದೈಹಿಕ ಗುಣಮಟ್ಟಗಳ ಪರೀಕ್ಷೆಗಳಲ್ಲಿ ಅರ್ಹರಾಗುವ ಅಭ್ಯರ್ಥಿಗಳನ್ನು ಲಿಖಿತ ಪರೀಕ್ಷೆಗೆ ಕರೆಯತಕ್ಕದ್ದು.<br><br>ಸೇವೆಯಲ್ಲಿ ಇರುವ ಅಭ್ಯರ್ಥಿಗಳು, ಕರ್ನಾಟಕ ರಾಜ್ಯ ಪೊಲೀಸಿನ ಯಾವುದೇ ವಿಭಾಗದಲ್ಲಿ ಅಸಿಸ್ಟೆಂಟ್ ಪೊಲೀಸ್ ಸಬ್ ಇನ್ಸ್‌ಪೆಕ್ಟರ್‌ಗಳ/ ಹೆಡ್ ಕಾನ್ಸ್‌ಟೇಬಲ್‌ಗಳ/ಪೊಲೀಸ್ ಕಾನ್ಸ್‌ಟೇಬಲ್‌ಗಳ ವೃಂದದಲ್ಲಿ ಐದು ವರ್ಷಗಳಿಗಿಂತ ಕಡಿಮೆ ಇಲ್ಲದಂತೆ ಸೇವೆಯನ್ನು ಸಲ್ಲಿಸಿರಬೇಕು. | **(ಸಿ) ಮಾಜಿ ಸೈನಿಕ ಅಭ್ಯರ್ಥಿಗಳಿಗೆ:**<br><br>(i) ಅಭ್ಯರ್ಥಿಗಳು ಎರಡು ನಿಮಿಷಗಳಲ್ಲಿ 400 ಮೀಟರು ಓಡಬೇಕು.<br><br>(ii) **ಉದ್ದ ಜಿಗಿತ ಅಥವಾ ಎತ್ತರ ಜಿಗಿತ:**<br><br>**ಉದ್ದ ಜಿಗಿತ–** 2.50ಮೀಟರುಗಳಿಗೆ ಕಡಿಮೆ ಇಲ್ಲದಷ್ಟು<br><br>**ಎತ್ತರ ಜಿಗಿತ–** 0.90 ಮೀಟರುಗಳಿಗೆ ಕಡಿಮೆ ಇಲ್ಲದಷ್ಟು<br><br>ಅಭ್ಯರ್ಥಿಗಳು ಯಾವುದೇ ಒಂದು ಜಿಗಿತವನ್ನು ಅಥವಾ ಎರಡೂ ಜಿಗಿತಗಳನ್ನು ಮಾಡಲು ಆಯ್ಕೆ ಮಾಡಿಕೊಳ್ಳಬಹುದು. ಆದರೆ, ಅವರು ಅವುಗಳ ಪೈಕಿ ಕೊನೇ ಪಕ್ಷ ಯಾವುದಾದರೂ ಒಂದರಲ್ಲಿ ಅರ್ಹತೆ ಗಳಿಸಬೇಕು (ಗರಿಷ್ಠ 3 ಅವಕಾಶಗಳಲ್ಲಿ)<br><br>**(iii) ಗುಂಡು ಎಸೆತ:** (4.00ಕಿ.ಗ್ರಾಂ): 3.75 ಮೀಟರುಗಳಿಗಿಂತ ಕಡಿಮೆ ಇಲ್ಲದಷ್ಟು.<br><br>ಸೇವೆಯಲ್ಲಿರುವ ಅಭ್ಯರ್ಥಿಗಳು ಮತ್ತು ಮಾಜಿ ಸೈನಿಕ ಅಭ್ಯರ್ಥಿಗಳೂ ಸೇರಿ ದೈಹಿಕ ಗುಣಮಟ್ಟ ಪರೀಕ್ಷೆಗೆ ಅರ್ಹತೆ ಗಳಿಸಲು ಕಾಲಾನುಕ್ರಮಣಿಕೆಯಲ್ಲಿ ನಡೆಯುವ ಮೇಲ್ಕಂಡ ಎಲ್ಲ 3 ಪರೀಕ್ಷೆಗಳಲ್ಲೂ ಅರ್ಹರಾಗಬೇಕು.<br><br>**IV ದೈಹಿಕ ಗುಣಮಟ್ಟ ಪರೀಕ್ಷೆ:–**<br><br>(ಎ) ಎತ್ತರ– 170 ಸೆಂಮೀಗಿಂತ ಕಡಿಮೆ ಇರಬಾರದು (ಇದು ಮಾಜಿ ಸೈನಿಕ ಅಭ್ಯರ್ಥಿಗಳಿಗೆ ಅನ್ವಯವಾಗುವುದಿಲ್ಲ), ಸೇವೆಯಲ್ಲಿರುವ ಅಭ್ಯರ್ಥಿಗಳು 168 ಸೆಂಮೀಗಿಂತ ಕಡಿಮೆ ಇರಬಾರದು.<br><br>(ಬಿ) ಎದೆ– ಕನಿಷ್ಠ 5 ಸೆಂಮೀ.ಗಳ ಹಿಗ್ಗಿಸುವಿಕೆ ಜೊತೆಗೆ ಪೂರ್ಣವಾಗಿ ಹಿಗ್ಗಿಸಿದಾಗ 86 ಸೆಂ.ಮೀಗಿಂತ ಕಡಿಮೆ ಇರಬಾರದು.<br><br>**V. ವೈದ್ಯಕೀಯ ಪರೀಕ್ಷೆ:–**<br><br>ತಾತ್ಕಾಲಿಕ ಆಯ್ಕೆ ಪಟ್ಟಿಯನ್ನು ಪ್ರಕಟಿಸಿದ ನಂತರ, ತಾತ್ಕಾಲಿಕ ಆಯ್ಕೆ ಪಟ್ಟಿಯಲ್ಲಿ ಸೇರಿಸಲಾಗಿರುವ ಅಭ್ಯರ್ಥಿಗಳು, ಆಯ್ಕೆ ಪ್ರಾಧಿಕಾರವು ತೀರ್ಮಾನಿಸಿದ ಸಮಯ ಮತ್ತು ಸ್ಥಳದಲ್ಲಿ, ವೈದ್ಯಕೀಯ ಮಂಡಳಿಯ ಮುಂದೆ, ಸಮಗ್ರ ವೈದ್ಯಕೀಯ ಪರೀಕ್ಷೆ ಮಾಡಿಸಿಕೊಳ್ಳಲು ಹಾಜರಾಗತಕ್ಕದ್ದು. |

<table>
<tr><th>(1)</th><th>(2)</th><th>(3)</th><th>(4)</th><th>(5)</th><th>(6)</th><th>(7)</th></tr>
<tr><td></td><td></td><td></td><td></td><td></td>
<td>

**ಲಿಖಿತ ಪರೀಕ್ಷೆ:**

ಇಂಗ್ಲೀಷ್ ಅಥವಾ ಕನ್ನಡದಲ್ಲಿ ಪದವಿ ಮಟ್ಟದ ಎರಡು ಪತ್ರಿಕೆಗಳಿರುವ ಒಂದು ಲಿಖಿತ ಪರೀಕ್ಷೆ ಇರತಕ್ಕದ್ದು.

ಎ) **ಪತ್ರಿಕೆ–1:–** ಇದು ಎರಡು ಭಾಗಗಳನ್ನು ಹೊಂದಿರತಕ್ಕದ್ದು. ಮೊದಲ ಭಾಗವು ಮೂವತ್ತು ಅಂಕಗಳುಳ್ಳ ಇಂಗ್ಲೀಷ್ ಅಥವಾ ಕನ್ನಡದಲ್ಲಿ ಪ್ರಬಂಧ ಬರೆಯುವುದನ್ನು ಮತ್ತು ಎರಡನೇ ಭಾಗವು ಇಪ್ಪತ್ತು ಅಂಕಗಳನ್ನುಳ್ಳ, ಇಂಗ್ಲೀಷಿನಿಂದ ಕನ್ನಡಕ್ಕೆ ಮತ್ತು ಕನ್ನಡದಿಂದ ಇಂಗ್ಲೀಷಿಗೆ, ವಾಕ್ಯವೃಂದಗಳನ್ನು ಭಾಷಾಂತರ ಮಾಡುವುದನ್ನು ಒಳಗೊಂಡಿರುತ್ತದೆ. ಪತ್ರಿಕೆ -I ಒಟ್ಟು ಐವತ್ತು ಅಂಕಗಳುಳ್ಳ ಒಂದು ಗಂಟೆಯ ಅವಧಿಯದ್ದಾಗಿರುತ್ತದೆ. ಕನಿಷ್ಠ ಅಂಕಗಳು ಎಂಬುದು ಇರುವುದಿಲ್ಲ.

ಬಿ) **ಪತ್ರಿಕೆ–II** : ಸಾಮಾನ್ಯ ಅಧ್ಯಯನದ ಪ್ರಶ್ನೆಗಳನ್ನು ಒಳಗೊಂಡಿದ್ದು–

(i) ಸಾಮಾನ್ಯ ಜ್ಞಾನವು ಈ ಮುಂದಿನವುಗಳಿಗೆ ಸಂಬಂಧಿಸಿರುತ್ತದೆ– (ಎ)ವಿಜ್ಞಾನ (ಬಿ)ಭೂಗೋಳ ಶಾಸ್ತ್ರ (ಸಿ)ಆಧುನಿಕ ಭಾರತ ಇತಿಹಾಸ; ರಾಷ್ಟ್ರೀಯ ಸ್ವಾತಂತ್ರ್ಯ ಚಳುವಳಿ (ಡಿ)ಭಾರತದ ಸಂವಿಧಾನ; ಮೂಲಭೂತ ಹಕ್ಕುಗಳು ಮತ್ತು ನಿರ್ದೇಶಕ ತತ್ವಗಳು:

(ii) ಸಾಮಾನ್ಯ ಭೌದ್ಧಿಕ ಸಾಮರ್ಥ್ಯವು ಈ ಮುಂದಿನವುಗಳನ್ನು ಒಳಗೊಂಡಿರುತ್ತದೆ:– (ಎ)ಗಣನಾ ಕೌಶಲ್ಯಗಳು (ಬಿ) ಸ್ಥಳಗಳನ್ನು ಗುರುತಿಸುವ ಕೌಶಲ್ಯಗಳು (ಸಿ)ಗ್ರಹಿಕೆ (ಡಿ)ತೀರ್ಪು ಮತ್ತು (ಇ)ನಿರ್ಣಯ ತೆಗೆದುಕೊಳ್ಳುವ ಸಾಮರ್ಥ್ಯ (ಎಫ್) ನೈತಿಕ ಶಿಕ್ಷಣ. ಇದು ಬಹು ಆಯ್ಕೆಯ ಉತ್ತರಗಳಿರುವ ಆಬ್ಜೆಕ್ಟಿವ್ ಪ್ರಶ್ನೆಗಳ ಮಾದರಿಯಲ್ಲಿದ್ದು ಒಂದು ಗಂಟೆ ಮೂವತ್ತು ನಿಮಿಷಗಳ ಅವಧಿಯದ್ದಾಗಿರತಕ್ಕದ್ದು. ಇದು ಒಂದುನೂರ ಐವತ್ತು ಅಂಕಗಳನ್ನು ಹೊಂದಿರತಕ್ಕದ್ದು.

**ಮೌಖಿಕ ಪರೀಕ್ಷೆ:–**

ಲಿಖಿತ ಪರೀಕ್ಷೆಯಲ್ಲಿ ಪಡೆದ ಅಂಕಗಳ ಆಧಾರದ ಮೇಲೆ, ಪ್ರತಿಯೊಂದು ಪ್ರವರ್ಗದ ಪ್ರತಿಯೊಂದು ಹುದ್ದೆಗೆ 1:2ರ ಅನುಪಾತದಲ್ಲಿ ಹತ್ತು ಅಂಕಗಳುಳ್ಳ ಮೌಖಿಕ ಪರೀಕ್ಷೆಗೆ ಅಭ್ಯರ್ಥಿಗಳು ಹಾಜರಾಗಲು ಅಗತ್ಯಪಡಿಸಲಾಗಿದೆ. ಕನಿಷ್ಠ

</td>
<td>

ವೈದ್ಯಕೀಯ ಪರೀಕ್ಷೆಯು ಈ ಕೆಳಗಿನವುಗಳನ್ನು ಒಳಗೊಂಡಿರತಕ್ಕದ್ದು:–

(ಎ) **ದೃಷ್ಟಿ:–**

ಕನ್ನಡಕ ಸಹಿತ ಅಥವಾ ಕನ್ನಡಕ ಇಲ್ಲದೆ ದೂರ ಮತ್ತು ಸಮೀಪ ದೃಷ್ಟಿಯನ್ನು ಈ ಕೆಳಗಿನ ಪ್ರಮಾಣದಲ್ಲಿ ಹೊಂದಿರಲೇಬೇಕು:–

**(i) ದೂರದೃಷ್ಟಿ:–**

<table>
<tr><th>ಉತ್ತಮ ಕಣ್ಣು</th><th>ದೋಷಯುಕ್ತ ಕಣ್ಣು</th></tr>
<tr><td>6 / 9</td><td>6 / 9</td></tr>
<tr><td>6 / 9</td><td>6 / 12</td></tr>
</table>

**(ii) ಸಮೀಪ ದೃಷ್ಟಿ:–**

<table>
<tr><th>ಉತ್ತಮ ಕಣ್ಣು</th><th>ದೋಷಯುಕ್ತ ಕಣ್ಣು</th></tr>
<tr><td>0/6</td><td>0/8</td></tr>
</table>

(iii) ಪ್ರತಿಯೊಂದು ಕಣ್ಣು ಸಂಪೂರ್ಣ ಕ್ಷೇತ್ರ ದೃಷ್ಟಿ ಹೊಂದಿರಲೇಬೇಕು.

ಬಣ್ಣ ಕುರುಡು, ಮೆಳ್ಳಗಣ್ಣು ಅಥವಾ ಯಾವುದೇ ರೋಗಗ್ರಸ್ತ ಸ್ಥಿತಿಯ ಕಣ್ಣುಗಳನ್ನು ಅಥವಾ ಕಣ್ಣಿನ ರೆಪ್ಪೆಗಳನ್ನು ಅನರ್ಹತೆ ಎಂದು ಭಾವಿಸತಕ್ಕದ್ದು.

**(ಬಿ) ಶ್ರವಣ ಪರೀಕ್ಷೆಗಳು :–**

(i) ರಿನ್ನೆಸ್ ಟೆಸ್ಟ್

(ii) ವೆಬ್ಬರ್ಸ್ ಟೆಸ್ಟ್

(iii) ಟೆಸ್ಟ್ ಫಾರ್ ವೆರ್ಟಿಗೊ

ಮೇಲೆ ಹೇಳಲಾದ ಪರೀಕ್ಷೆಗಳ ಅವಧಿಯಲ್ಲಿ ಕಂಡುಬಂದ ಯಾವುದೇ ನ್ಯೂನತೆಗಳನ್ನು ಅನರ್ಹತೆ ಎಂದು ಪರಿಗಣಿಸತಕ್ಕದ್ದು.

</td></tr>
</table>

| (1) | (2) | (3) | (4) | (5) | (6) | (7) |
|---|---|---|---|---|---|---|
| | | | | | ಅಂಕಗಳು ಎಂಬುದು ಇರತಕ್ಕದ್ದಲ್ಲ. ಲಿಖಿತ ಪರೀಕ್ಷೆ ಮತ್ತು ಮೌಖಿಕ ಪರೀಕ್ಷೆಗಳಲ್ಲಿ ಪಡೆದ ಅಂಕಗಳ ಆಧಾರದ ಮೇಲೆ, ಯಾವುದೇ ಕಾನೂನು, ನಿಯಮ ಅಥವಾ ಆದೇಶದ ಮೇರೆಗೆ ಉಪಬಂಧಿಸಿದ ಹುದ್ದೆಗಳ ಮೀಸಲಾತಿಯನ್ನು ಪರಿಗಣನೆಗೆ ತೆಗೆದುಕೊಂಡು ಖಾಲಿ ಹುದ್ದೆಗಳ ಸಂಖ್ಯೆಗೆ ಸಮನಾದ ಅಭ್ಯರ್ಥಿಗಳ ಒಂದು ತಾತ್ಕಾಲಿಕ ಆಯ್ಕೆ ಪಟ್ಟಿಯನ್ನು ಆಯ್ಕೆ ಪ್ರಾಧಿಕಾರವು ಸಿದ್ದಪಡಿಸತಕ್ಕದ್ದು. ತಾತ್ಕಾಲಿಕ ಆಯ್ಕೆ ಪಟ್ಟಿಯನ್ನು ಅಧಿಕೃತ ರಾಜ್ಯ ಪತ್ರದಲ್ಲಿ ಪ್ರಕಟಿಸತಕ್ಕದ್ದು ಮತ್ತು ಅವರನ್ನು ವೈದ್ಯಕೀಯ ಪರೀಕ್ಷೆಗೆ ಕಳುಹಿಸತಕ್ಕದ್ದು.<br><br>ವೈದ್ಯಕೀಯ ಮಂಡಳಿಯು ಕಳುಹಿಸಿದ ವರದಿಯನ್ನು ಆಧರಿಸಿ, ಆಯ್ಕೆ ಪ್ರಾಧಿಕಾರವು ಅಭ್ಯರ್ಥಿಗಳ ಅಂತಿಮ ಆಯ್ಕೆ ಪಟ್ಟಿಯನ್ನು ಸಿದ್ದಪಡಿಸ ತಕ್ಕದ್ದು ಮತ್ತು ಅದನ್ನು ಪ್ರಕಟಿಸತಕ್ಕದ್ದು. ಹಾಗೆ ಸಿದ್ಧಪಡಿಸಲಾದ ಮತ್ತು ಪ್ರಕಟಿಸಲಾದ ಅಭ್ಯರ್ಥಿಗಳ ಅಂತಿಮ ಆಯ್ಕೆ ಪಟ್ಟಿಯನ್ನು, ಅಂಥ ಅಭ್ಯರ್ಥಿಗಳು ನೇಮಕಾತಿಗೆ ಎಲ್ಲ ರೀತಿಯಲ್ಲಿ ಸೂಕ್ತರಾಗಿದ್ದರೆಂದು ಮನವರಿಕೆ ಮಾಡಿಕೊಳ್ಳಲು ಅವಶ್ಯವಿರುವಂಥ ವಿಚಾರಣೆಯನ್ನು ಮಾಡಿದ ತರುವಾಯ, ಪಟ್ಟಿಯಲ್ಲಿ ಅವರ ಹೆಸರುಗಳು ಇರುವ ಕ್ರಮದಲ್ಲಿ, ನಿರ್ದಿಷ್ಟ ಪ್ರವರ್ಗದ ಹುದ್ದೆಗಳಲ್ಲಿ ಖಾಲಿ ಸ್ಥಾನಗಳಿಗೆ ನೇಮಕ ಮಾಡಲು ನೇಮಕಾತಿ ಪ್ರಾಧಿಕಾರಕ್ಕೆ ಕಳುಹಿಸತಕ್ಕದ್ದು. | (ಸಿ) ಈ ಕೆಳಗಿನ ಯಾವುದೇ ಒಂದು ನ್ಯೂನತೆಯು ಸಹ ದೈಹಿಕ ಅನರ್ಹತೆಯಾಗತಕ್ಕದ್ದು:–<br><br>(i) ತಾಕು ಮಂಡಿಗಳು<br><br>(ii) ಬಿಲ್ಲುಗಾಲುಗಳು<br><br>(iii) ಚಪ್ಪಟೆ ಪಾದ<br><br>(iv) ಗಂಟು ನರಗಳು<br><br>(v) ಮಾತಿನಲ್ಲಿ ಉಗ್ಗು.<br><br>(ಡಿ) ಪರೀಕ್ಷೆ ಮಾಡಲು ಎದೆಯ ಎಕ್ಸರೆಯನ್ನು ತೆಗೆಯತಕ್ಕದ್ದು.<br><br>ಮೇಲಿನ ಎಲ್ಲಾ ಪರೀಕ್ಷೆಗಳನ್ನು ವೈದ್ಯಕೀಯ ಮಂಡಳಿಯು ನಡೆಸತಕ್ಕದ್ದು. ವೈದ್ಯಕೀಯ ಪರೀಕ್ಷೆಯಲ್ಲಿ ದೈಹಿಕವಾಗಿ ಸಮರ್ಥರಾಗಿದ್ದಾರೆಂದು ಪ್ರಮಾಣೀಕರಿಸಲ್ಪಡುವಂಥ ಅಭ್ಯರ್ಥಿಗಳನ್ನು ಮಾತ್ರ ನೇಮಕಾತಿಗಾಗಿ ಪರಿಗಣಿಸತಕ್ಕದ್ದು.<br><br>**VI. ತರಬೇತಿ:–**<br><br>ಆಯ್ಕೆಯಾದ ಅಭ್ಯರ್ಥಿಗಳು ಡಿಜಿ ಮತ್ತು ಐಜಿಪಿಯವರು ಕಾಲಕಾಲಕ್ಕೆ ನಿಗದಿಪಡಿಸುವ ತರಬೇತಿಗೆ ಒಳಪಡತಕ್ಕದ್ದು. ತರಬೇತಿಯನ್ನು ಯಶಸ್ವಿಯಾಗಿ ಪೂರ್ಣಗೊಳಿಸದಿದ್ದಲ್ಲಿ, ನೇರ ನೇಮಕಾತಿ ಹೊಂದಿದವರು ಸೇವೆಯಿಂದ ವಜಾಗೊಳ್ಳಲು ಗುರಿಯಾಗುತ್ತಾರೆ ಮತ್ತು ಸೇವೆಯಲ್ಲಿ ಇರುವ ಅಭ್ಯರ್ಥಿಗಳಾದರೆ ಅವರುಗಳನ್ನು ಅವರ ಮೂಲ ದರ್ಜೆಗೆ ಮತ್ತು ವೇತನಕ್ಕೆ ಇಳಿಸಲಾಗುವುದು.<br><br>**VII ಪ್ರೊಬೇಷನ್:–**<br><br>ಕರ್ನಾಟಕ ಸಿವಿಲ್ ಸೇವಾ (ಪ್ರೊಬೇಷನ್) ನಿಯಮಗಳು, 1977ರಲ್ಲಿ ಏನೇ ಇದ್ದರೂ, ನೇರ ನೇಮಕಾತಿಯ ಮತ್ತು ಸೇವೆಯಲ್ಲಿ ಇರುವ ಅಭ್ಯರ್ಥಿಗಳು, ತರಬೇತಿಯ ಅವಧಿಯೂ ಸೇರಿದಂತೆ ಅವರು ಸೇವೆಗೆ ಸೇರಿದ ದಿನಾಂಕದಿಂದ ಎರಡು ವರ್ಷ ಆರು ತಿಂಗಳು ಪ್ರೊಬೇಷನ್‌ನಲ್ಲಿರತಕ್ಕದ್ದು. |

| (1) | (2) | (3) | (4) | (5) | (6) | (7) |
|---|---|---|---|---|---|---|
| | | | | | | **VIII. ಮುಂಬಡ್ತಿಗಾಗಿ:–**<br>ಅಸಿಸ್ಟೆಂಟ್ ರಿಸರ್ವ್ ಸಬ್ ಇನ್ಸ್‌ಪೆಕ್ಟರ್ ವೃಂದದಲ್ಲಿ ಐದು ವರ್ಷಗಳಿಗೆ ಕಡಿಮೆ ಇಲ್ಲದಂತೆ ಸೇವೆಯನ್ನು ಸಲ್ಲಿಸಿರತಕ್ಕದ್ದು:<br>ಪರಂತು, ಐದು ವರ್ಷಗಳಿಗೆ ಕಡಿಮೆ ಇಲ್ಲದಂತೆ ಸೇವೆಯನ್ನು ಸಲ್ಲಿಸಿದ ನೌಕರರು ಲಭ್ಯವಿರದಿದ್ದಲ್ಲಿ, ಮೂರು ವರ್ಷಗಳಿಗಿಂತ ಕಡಿಮೆ ಇಲ್ಲದಂತೆ ಸೇವೆಯನ್ನು ಸಲ್ಲಿಸಿರುವ ನೌಕರರನ್ನು ಮುಂಬಡ್ತಿಗಾಗಿ ಪರಿಗಣಿಸಬಹುದು. |
| **10.** | **ಸ್ಪೆಷಲ್ ರಿಸರ್ವ್ ಪೊಲೀಸ್ ಸಬ್ ಇನ್ಸ್‌ಪೆಕ್ಟರ್ (ಮಹಿಳೆ)**<br>**(ರೂ.10000–18150)** | **10** | **–** | **10** | **ಶೇಕಡ ಅರವತ್ತರಷ್ಟನ್ನು ನೇರ ನೇಮಕಾತಿ ಮೂಲಕ ; ಮತ್ತು**<br>ಶೇಕಡ ಹತ್ತರಷ್ಟನ್ನು ಸ್ಪೆಷಲ್ ಅಸಿಸ್ಟೆಂಟ್ ರಿಸರ್ವ್ ಸಬ್ ಇನ್ಸ್‌ಪೆಕ್ಟರುಗಳು (ಮಹಿಳೆ)/ ಸ್ಪೆಷಲ್ ರಿಸರ್ವ್ ಹೆಡ್ ಕಾನ್ಸ್‌ಟೇಬಲ್‌ಗಳು (ಮಹಿಳೆ)/ ಸ್ಪೆಷಲ್ ರಿಸರ್ವ್ ಪೊಲೀಸ್ ಕಾನ್ಸ್‌ಟೇಬಲ್‌ಗಳ (ಮಹಿಳೆ) ವೃಂದಗಳಿಂದ ಅಥವಾ ಕರ್ನಾಟಕ ರಾಜ್ಯ ಪೊಲೀಸಿನ ಯಾವುದೇ ವಿಭಾಗದ ತತ್ಸಮಾನ ವೃಂದಗಳಿಂದ (ಮಹಿಳೆ) ಸೇವೆಯಲ್ಲಿರುವ ಅಭ್ಯರ್ಥಿಗಳ ನೇಮಕಾತಿ ಮೂಲಕ; ಮತ್ತು<br>ಶೇಕಡ ಮೂವತ್ತರಷ್ಟನ್ನು ಅಸಿಸ್ಟೆಂಟ್ ರಿಸರ್ವ್ ಸಬ್ ಇನ್ಸ್‌ಪೆಕ್ಟರುಗಳ (ಮಹಿಳೆ) ವೃಂದದಿಂದ ಮುಂಬಡ್ತಿ ಮೂಲಕ.<br>**ನೇರ ನೇಮಕಾತಿಗಾಗಿ ಆಯ್ಕೆ ವಿಧಾನ:–**<br>ನೇರ ನೇಮಕಾತಿಯನ್ನು ಆಯ್ಕೆ ಪ್ರಾಧಿಕಾರವು ಮಾಡತಕ್ಕದ್ದು.<br>ಆಯ್ಕೆ ಪ್ರಾಧಿಕಾರವು ಅಧಿಕೃತ ರಾಜ್ಯ ಪತ್ರದಲ್ಲಿ ಅಧಿಸೂಚನೆ ಹೊರಡಿಸುವ ಮೂಲಕ, ರಾಜ್ಯವ್ಯಾಪಿ ಪ್ರಸಾರವುಳ್ಳ ಒಂದು ಕನ್ನಡ ಭಾಷೆಯ ಮತ್ತು ಒಂದು ಇಂಗ್ಲೀಷ್ ಭಾಷೆಯ ದಿನಪತ್ರಿಕೆಯಲ್ಲಿ, ಹೀಗೆ ಎರಡು ದಿನ ಪತ್ರಿಕೆಗಳಲ್ಲಿ ಜಾಹೀರಾತು ನೀಡುವ ಮೂಲಕ ಮತ್ತು ಅಂತರ್‌ಜಾಲ ಮತ್ತು ವಿದ್ಯುನ್ಮಾನ ಮಾಧ್ಯಮದ ಮೂಲಕ ವ್ಯಾಪಕ ಪ್ರಚಾರ ನೀಡತಕ್ಕದ್ದು. ಈ ನಿಯಮಗಳ ಅಡಿಯಲ್ಲಿ ನೇಮಕಾತಿಯ ಉದ್ದೇಶಕ್ಕಾಗಿ ನಿಗದಿ ಪಡಿಸಬಹುದಾದ ನಮೂನೆಯಲ್ಲಿ ಎಲ್ಲಾ ಅರ್ಹ ಮಹಿಳಾ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸತಕ್ಕದ್ದು.<br>ಸೇವೆಯಲ್ಲಿ ಇರುವ ಅಭ್ಯರ್ಥಿಗಳನ್ನೂ ಒಳಗೊಂಡಂತೆ ನೇರ ನೇಮಕಾತಿಯನ್ನು ಈ ಕೆಳಗಿನವರನ್ನು ಒಳಗೊಂಡ ಆಯ್ಕೆ ಪ್ರಾಧಿಕಾರವು ಮಾಡತಕ್ಕದ್ದು:– | **I. ನೇರ ನೇಮಕಾತಿಗಾಗಿ:–**<br>**(ಎ) ವಯೋಮಿತಿ:–**<br>ಕರ್ನಾಟಕ ಸಿವಿಲ್ ಸೇವೆಗಳ (ಸಾಮಾನ್ಯ ನೇಮಕಾತಿ) ನಿಯಮಗಳು 1977ರ 6ನೇ ನಿಯಮದಲ್ಲಿ ಏನೇ ಇದ್ದಾಗ್ಯೂ, ಇಪ್ಪತ್ತೊಂದು ವರ್ಷ ವಯಸ್ಸು ಪೂರ್ಣಗೊಂಡಿರಬೇಕು. ಆದರೆ–<br>**(i)** ಪರಿಶಿಷ್ಟ ಜಾತಿಗಳು, ಪರಿಶಿಷ್ಟ ಪಂಗಡಗಳು ಅಥವಾ ಇತರೆ ಹಿಂದುಳಿದ ವರ್ಗಗಳಿಗೆ ಸೇರಿದವರಾಗಿದ್ದರೆ ಇಪ್ಪತ್ತೆಂಟು ವರ್ಷ ವಯಸ್ಸನ್ನು ಮೀರಿರಬಾರದು.<br>**(ii)** ಇತರರಾಗಿದ್ದರೆ ಇಪ್ಪತ್ತಾರು ವರ್ಷ ವಯಸ್ಸನ್ನು ಮೀರಿರಬಾರದು.<br>**(ಬಿ) ಸೇವೆಯಲ್ಲಿ ಇರುವವರು:–**<br>ಈ ಕೆಳಗಿನ ವಯಸ್ಸನ್ನು ಮೀರಿರಬಾರದು:–<br>**(i)** ಪರಿಶಿಷ್ಟ ಜಾತಿಗಳು, ಪರಿಶಿಷ್ಟ ಪಂಗಡಗಳು ಅಥವಾ ಇತರೆ ಹಿಂದುಳಿದ ವರ್ಗಗಳಿಗೆ ಸೇರಿದ ಅಭ್ಯರ್ಥಿಗಳ ಪ್ರಕರಣಗಳಲ್ಲಿ ನಲವತ್ತು ವರ್ಷಗಳು;<br>**(ii)** ಇತರರ ಪ್ರಕರಣಗಳಲ್ಲಿ ಮೂವತ್ತೈದು ವರ್ಷಗಳು.<br>**II. ಶೈಕ್ಷಣಿಕ ವಿದ್ಯಾರ್ಹತೆ:–**<br>**ನೇರ ನೇಮಕಾತಿ ಮತ್ತು ಸೇವೆಯಲ್ಲಿರುವ ಅಭ್ಯರ್ಥಿಗಳಿಗಾಗಿ:–**<br>ಅಂಗೀಕೃತ ವಿಶ್ವವಿದ್ಯಾನಿಲಯದಿಂದ ಪಡೆದ ಒಂದು ಪದವಿಯನ್ನು ಅಥವಾ ತತ್ಸಮಾನ ವಿದ್ಯಾರ್ಹತೆಯನ್ನು ಹೊಂದಿರಬೇಕು. |

| (1) | (2) | (3) | (4) | (5) | (6) | (7) |
|---|---|---|---|---|---|---|
| | | | | | (1)ನೇಮಕಾತಿ ಪ್ರಭಾರದಲ್ಲಿರುವ ಅಡಿಷನಲ್ ಡೈರೆಕ್ಟರ್ ಜನರಲ್ ಆಫ್ ಪೊಲೀಸ್<br>– ಅಧ್ಯಕ್ಷರು<br>(2) ಅಡಿಷನಲ್ ಡೈರೆಕ್ಟರ್ ಜನರಲ್ ಆಫ್ ಪೊಲೀಸ್, ಕೆ.ಎಸ್.ಆರ್.ಪಿ.<br>– ಸದಸ್ಯರು<br>(3) ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕೆ.ಎಸ್.ಆರ್.ಪಿ.<br>– ಸದಸ್ಯರು<br>(4) ಕಾನೂನುಬದ್ಧವಾಗಿ ಸ್ಥಾಪಿತವಾದ ವಿಶ್ವವಿದ್ಯಾನಿಲಯದ ರೀಡರ್/ಸಹ ಪ್ರಾಧ್ಯಾಪಕ ದರ್ಜೆಗಿಂತ ಕಡಿಮೆ ಇಲ್ಲದ ದರ್ಜೆಯ ಒಬ್ಬ ಸಾಮಾಜಿಕ ಮನಶಾಸ್ತ್ರಜ್ಞರು (ಅಧ್ಯಕ್ಷರಿಂದ ನಾಮನಿರ್ದೇಶಿತರಾದವರು)<br>– ಸದಸ್ಯರು<br>(5) ಸಮಾಜ ಕಲ್ಯಾಣ ಇಲಾಖೆಯ ನಿರ್ದೇಶಕರು ಅಥವಾ ಅವರಿಂದ ನಾಮ ನಿರ್ದೇಶನಗೊಂಡ ಜಂಟ ನಿರ್ದೇಶಕರ ದರ್ಜೆಗೆ ಕಡಿಮೆ ಇಲ್ಲದ ದರ್ಜೆಯ ಅಧಿಕಾರಿ.<br>(6) ಹಿಂದುಳಿದ ವರ್ಗಗಳ ನಿರ್ದೇಶಕರು ಅಥವಾ ಅವರಿಂದ ನಾಮ ನಿರ್ದೇಶನ ಗೊಂಡ ಹಿಂದುಳಿದ ವರ್ಗಗಳ ಜಂಟಿ ನಿರ್ದೇಶಕರ ದರ್ಜೆಗೆ ಕಡಿಮೆ ಇಲ್ಲದ ದರ್ಜೆಯ ಅಧಿಕಾರಿ<br>– ಸದಸ್ಯರು<br>(7) ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆಯ ನಿರ್ದೇಶಕರು ಅಥವಾ ಅವರಿಂದ ನಾಮನಿರ್ದೇಶಿತರಾದ ಅಲ್ಪ ಸಂಖ್ಯಾತರ ಕಲ್ಯಾಣ ಇಲಾಖೆಯ ಜಂಟಿ ನಿರ್ದೇಶಕರ ದರ್ಜೆಗಿಂತ ಕಡಿಮೆ ಇಲ್ಲದ ದರ್ಜೆಯ ಒಬ್ಬ ಅಧಿಕಾರಿ<br>– ಸದಸ್ಯರು<br>(8) ನೇಮಕಾತಿ ಪ್ರಭಾರದಲ್ಲಿರುವ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ /ಡೆಪ್ಯೂಟಿ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ – ಸದಸ್ಯ ಕಾರ್ಯದರ್ಶಿ ಯಾಗಿರತಕ್ಕದ್ದು. | **III. ದೈಹಿಕ ಸಹನೆ ಪರೀಕ್ಷೆ:–**<br>**ಎ) ನೇರ ನೇಮಕಾತಿಗೆ:–**<br>(i) ಅಭ್ಯರ್ಥಿಗಳು ನಾಲ್ಕು ನೂರು ಮೀಟರ್‌ಗಳನ್ನು ಎರಡು ನಿಮಿಷಗಳಲ್ಲಿ ಓಡಬೇಕು.<br>(ii) **ಉದ್ದ ಜಿಗಿತ ಅಥವಾ ಎತ್ತರ ಜಿಗಿತ**<br>**ಉದ್ದ ಜಿಗಿತ–** 2.50 ಮೀಟರುಗಳಿಗಿಂತ ಕಡಿಮೆ ಇಲ್ಲದಷ್ಟು.<br>**ಎತ್ತರ ಜಿಗಿತ–** 0.90 ಮೀಟರುಗಳಿಗಿಂತ ಕಡಿಮೆ ಇಲ್ಲದಷ್ಟು<br>ಅಭ್ಯರ್ಥಿಗಳು ಯಾವುದೇ ಒಂದು ಜಿಗಿತವನ್ನು ಅಥವಾ ಎರಡೂ ಜಿಗಿತಗಳನ್ನು ಮಾಡಲು ಆಯ್ಕೆ ಮಾಡಿಕೊಳ್ಳಬಹುದು. ಆದರೆ, ಅವರು ಅವುಗಳ ಪೈಕಿ ಕೊನೇ ಪಕ್ಷ ಯಾವುದಾದರೂ ಒಂದರಲ್ಲಿ ಅರ್ಹತೆ ಗಳಿಸಬೇಕು (ಗರಿಷ್ಠ 3 ಅವಕಾಶಗಳಲ್ಲಿ)<br>(iii) **ಗುಂಡು ಎಸೆತ:** (4.00 ಕಿ.ಗ್ರಾಂ) 3.75 ಮೀಟರುಗಳಿಗೆ ಕಡಿಮೆ ಇಲ್ಲದಷ್ಟು<br>**ಬಿ) ಸೇವೆಯಲ್ಲಿರುವ ಅಭ್ಯರ್ಥಿಗಳಿಗೆ:–**<br>(i)ಅಭ್ಯರ್ಥಿಗಳು ನಾಲ್ಕು ನೂರು ಮೀಟರ್‌ಗಳನ್ನು ಎರಡು ನಿಮಿಷ ಮೂವತ್ತು ಸೆಕೆಂಡುಗಳಲ್ಲಿ ಓಡಬೇಕು.<br>(ii) **ಉದ್ದ ಜಿಗಿತ ಅಥವಾ ಎತ್ತರ ಜಿಗಿತ**<br>**ಉದ್ದ ಜಿಗಿತ–** 2.00 ಮೀಟರುಗಳಿಗೆ ಕಡಿಮೆ ಇಲ್ಲದಷ್ಟು.<br>**ಎತ್ತರ ಜಿಗಿತ–** 0.80 ಮೀಟರಿಗೆ ಕಡಿಮೆ ಇಲ್ಲದಷ್ಟು.<br>ಅಭ್ಯರ್ಥಿಗಳು ಯಾವುದೇ ಒಂದು ಜಿಗಿತವನ್ನು ಅಥವಾ ಎರಡೂ ಜಿಗಿತಗಳನ್ನು ಮಾಡಲು ಆಯ್ಕೆ ಮಾಡಿಕೊಳ್ಳಬಹುದು. ಆದರೆ, ಅವರು ಅವುಗಳ ಪೈಕಿ ಕೊನೇ ಪಕ್ಷ ಯಾವುದಾದರೂ ಒಂದರಲ್ಲಿ ಅರ್ಹತೆ ಗಳಿಸಬೇಕು (ಗರಿಷ್ಠ 3 ಅವಕಾಶಗಳಲ್ಲಿ) |

<table>
<tr><th>(1)</th><th>(2)</th><th>(3)</th><th>(4)</th><th>(5)</th><th>(6)</th><th>(7)</th></tr>
<tr><td></td><td></td><td></td><td></td><td></td>
<td>
ಪರಂತು, ಇಂಡಿಯಾ ರಿಸರ್ವ್ ಬೆಟಾಲಿಯನ್‌ಗೆ ನೇಮಕಾತಿ ಮಾಡುವುದಕ್ಕೆ ಸಂಬಂಧಿಸಿದಂತೆ, ಆಯ್ಕೆ ಸಮಿತಿಯ ಮೇಲ್ಕಂಡ ಸದಸ್ಯರ ಜೊತೆಗೆ ಕೇಂದ್ರ ಪೊಲೀಸ್ ದಳದ ಕಮಾಂಡೆಂಟರ ದರ್ಜೆಗಿಂತ ಕಡಿಮೆಯಲ್ಲದ ದರ್ಜೆಯ ಒಬ್ಬ ಅಧಿಕಾರಿ ಇರತಕ್ಕದ್ದು.<br><br>
ಆಯ್ಕೆ ಪ್ರಾಧಿಕಾರವು ದೈಹಿಕ ಸಹನೆ ಪರೀಕ್ಷೆ, ದೈಹಿಕ ಗುಣಮಟ್ಟಗಳ ಪರೀಕ್ಷೆ, ಮತ್ತು ಲಿಖಿತ ಪರೀಕ್ಷೆಗಳನ್ನು ನಡೆಸುವ ದಿನಾಂಕ, ಸಮಯ ಮತ್ತು ಸ್ಥಳವನ್ನು ಪ್ರಕಟಿಸತಕ್ಕದ್ದು.<br><br>
ಆಯ್ಕೆಯನ್ನು ಕೆಳಕಾಣಿಸಿದ ಪರೀಕ್ಷೆಗಳ ಆಧಾರದ ಮೇಲೆ ನಿರ್ಧರಿಸಿದ ಅರ್ಹತೆಯ ಮೇಲೆ ಮಾಡತಕ್ಕದ್ದು:–<br><br>
ದೈಹಿಕ ಸಹನೆ ಪರೀಕ್ಷೆ:–<br><br>
ಅಭ್ಯರ್ಥಿಗಳು ಮೊದಲು ದೈಹಿಕ ಸಹನೆ ಪರೀಕ್ಷೆಗೆ ಹಾಜರಾಗತಕ್ಕದ್ದು. ದೈಹಿಕ ಸಹನೆ ಪರೀಕ್ಷೆಯು ಕೇವಲ ಅರ್ಹತಾ ಪರೀಕ್ಷೆಯಾಗಿರುತ್ತದೆ. ದೈಹಿಕ ಸಹನೆ ಪರೀಕ್ಷೆಯಲ್ಲಿ ಅರ್ಹರಾದವರು ಮಾತ್ರ ದೈಹಿಕ ಗುಣಮಟ್ಟಗಳ ಪರೀಕ್ಷೆಗೆ ಹಾಜರಾಗತಕ್ಕದ್ದು.<br><br>
ದೈಹಿಕ ಗುಣಮಟ್ಟಗಳ ಪರೀಕ್ಷೆ:–<br><br>
ದೈಹಿಕ ಸಹನೆ ಪರೀಕ್ಷೆಯಲ್ಲಿ ಅರ್ಹರಾದವರು ಮಾತ್ರ ದೈಹಿಕ ಗುಣಮಟ್ಟದ ಪರೀಕ್ಷೆಗೆ ಹಾಜರಾಗತಕ್ಕದ್ದು. ನಿಗದಿಪಡಿಸಲಾದ ದೈಹಿಕ ಗುಣಮಟ್ಟಗಳನ್ನು ಹೊಂದಿಲ್ಲದವರನ್ನು ಅನರ್ಹಗೊಳಿಸತಕ್ಕದ್ದು.<br><br>
ದೈಹಿಕ ಸಹನೆ ಪರೀಕ್ಷೆಯನ್ನು ಮತ್ತು ದೈಹಿಕ ಗುಣಮಟ್ಟ ಪರೀಕ್ಷೆಯನ್ನು ಪೊಲೀಸ್ ಇನ್ಸ್‌ಪೆಕ್ಟರ್ ಜನರಲ್/ ಕೆಎಸ್‌ಆರ್‌ಪಿ (ಅಧ್ಯಕ್ಷರು) ಮತ್ತು ಡಿಜಿ ಮತ್ತು ಐಜಿಪಿ ಅವರು ನಾಮ ನಿರ್ದೇಶಿಸಿದ ಕೆಎಸ್‌ಆರ್‌ಪಿ ಕಮಾಂಡೆಂಟರ ದರ್ಜೆಯ ಇಬ್ಬರು ಅಧಿಕಾರಿಗಳನ್ನು (ಸದಸ್ಯರು) ಒಳಗೊಂಡಿರುವ ಸಮಿತಿಯು ನಡೆಸತಕ್ಕದ್ದು.<br><br>
ಒಬ್ಬ ಅಭ್ಯರ್ಥಿಯು ಒಂದಕ್ಕಿಂತ ಹೆಚ್ಚು ಕೇಂದ್ರಗಳಲ್ಲಿ ದೈಹಿಕ ಸಹನೆ ಪರೀಕ್ಷೆಗೆ ಮತ್ತು ದೈಹಿಕ ಗುಣ ಮಟ್ಟ ಪರೀಕ್ಷೆಗೆ ಹಾಜರಾಗಲು ಪ್ರಯತ್ನಿಸಿದರೆ ಅದನ್ನು ಅನರ್ಹತೆ ಎಂದು ಪರಿಗಣಿಸಲಾಗುವುದು.
</td>
<td>
(iii) ಗುಂಡು ಎಸೆತ (4.00 ಕಿ.ಗ್ರಾಂ) 3.50 ಮೀಟರುಗಳಿಗೆ ಕಡಿಮೆ ಇಲ್ಲದಷ್ಟು ಸೇವೆಯಲ್ಲಿರುವ ಅಭ್ಯರ್ಥಿಗಳು ಮತ್ತು ಮಾಜಿ ಸೈನಿಕ ಅಭ್ಯರ್ಥಿಗಳೂ ಸೇರಿ ದೈಹಿಕ ಗುಣಮಟ್ಟ ಪರೀಕ್ಷೆಗೆ ಅರ್ಹತೆ ಗಳಿಸಲು ಕಲಾನುಕ್ರಮಣಿಕೆಯಲ್ಲಿ ನಡೆಯುವ ಮೇಲ್ಕಂಡ ಎಲ್ಲ 3 ಪರೀಕ್ಷೆಗಳಲ್ಲೂ ಅರ್ಹರಾಗಬೇಕು.<br><br>
IV. ದೈಹಿಕ ಗುಣಮಟ್ಟ ಪರೀಕ್ಷೆ:<br><br>
(ಎ) ಎತ್ತರ– 158 ಸೆಂ.ಮೀ ಗಿಂತ ಕಡಿಮೆ ಇರತಕ್ಕದ್ದಲ್ಲ (ಸೇವೆಯಲ್ಲಿರುವವರಿಗೆ 157 ಸೆಂ.ಮೀ)<br><br>
(ಬಿ) ತೂಕ 45. ಕಿ.ಗ್ರಾಂಗಿಂತ ಕಡಿಮೆ ಇರತಕ್ಕದ್ದಲ್ಲ.<br><br>
ಅಭ್ಯರ್ಥಿಗಳು ಎರಡು ನಿಮಿಷ ಮೂವತ್ತು ಸೆಕೆಂಡುಗಳಲ್ಲಿ ನಾಲ್ಕು ನೂರು ಮೀಟರ್ ಓಡಬೇಕು.<br><br>
V. ವೈದ್ಯಕೀಯ ಪರೀಕ್ಷೆ:–<br><br>
ತಾತ್ಕಾಲಿಕ ಆಯ್ಕೆ ಪಟ್ಟಿಯನ್ನು ಪ್ರಕಟಿಸಿದ ನಂತರ, ತಾತ್ಕಾಲಿಕ ಆಯ್ಕೆ ಪಟ್ಟಿಯಲ್ಲಿ ಸೇರಿರುವ ಅಭ್ಯರ್ಥಿಗಳು, ಆಯ್ಕೆ ಪ್ರಾಧಿಕಾರವು ನಿಗದಿಪಡಿಸಿದ ಸಮಯ ಮತ್ತು ಸ್ಥಳದಲ್ಲಿ ವೈದ್ಯಕೀಯ ಮಂಡಳಿಯ ಮುಂದೆ ಸಮಗ್ರ ವೈದ್ಯಕೀಯ ಪರೀಕ್ಷೆ ಮಾಡಿಸಿಕೊಳ್ಳಲು ಹಾಜರಾಗತಕ್ಕದ್ದು.<br><br>
ವೈದ್ಯಕೀಯ ಪರೀಕ್ಷೆಯು ಈ ಕೆಳಗಿನವುಗಳನ್ನು ಒಳಗೊಂಡಿರತಕ್ಕದ್ದು:<br><br>
(ಎ) ದೃಷ್ಟಿ:–<br><br>
ಕನ್ನಡಕ ಸಹಿತ ಅಥವಾ ಕನ್ನಡಕ ಇಲ್ಲದೆ ಈ ಕೆಳಗಿನ ಪ್ರಮಾಣದ ದೂರ ಮತ್ತು ಸಮೀಪ ದೃಷ್ಟಿಯನ್ನು ಹೊಂದಿರಬೇಕು.<br><br>
(i) ದೂರದೃಷ್ಟಿ:–<br><br>
<table>
<tr><th>ಉತ್ತಮ ಕಣ್ಣು</th><th>ದೋಷಯುಕ್ತ ಕಣ್ಣು</th></tr>
<tr><td>6 / 9</td><td>6 / 9</td></tr>
<tr><td>6 / 9</td><td>6 / 12</td></tr>
</table>
</td></tr>
</table>

<table>
<tr><th>(1)</th><th>(2)</th><th>(3)</th><th>(4)</th><th>(5)</th><th>(6)</th><th>(7)</th></tr>
<tr><td></td><td></td><td></td><td></td><td></td>
<td>
ಟಿಪ್ಪಣಿ–(1):– ಈ ಮುಂದಿನ ಎರಡು ಪರೀಕ್ಷೆಗಳ ಪೈಕಿ ಯಾವುದೇ ಪರೀಕ್ಷೆಗೆ, ಎಂದರೆ– ದೈಹಿಕ ಸಹನೆ, ದೈಹಿಕ ಗುಣಮಟ್ಟಗಳ ಪರೀಕ್ಷೆಗಳಿಗೆ ಗೈರು ಹಾಜರಾಗುವ ಅಭ್ಯರ್ಥಿಗಳನ್ನು ಅನರ್ಹಗೊಳಿಸತಕ್ಕದ್ದು.<br><br>
ಟಿಪ್ಪಣಿ–(2):– ದೈಹಿಕ ಸಹನೆ ಮತ್ತು ದೈಹಿಕ ಗುಣಮಟ್ಟಗಳ ಪರೀಕ್ಷೆಗಳಲ್ಲಿ ಅರ್ಹರಾಗುವ ಅಭ್ಯರ್ಥಿಗಳನ್ನು ಲಿಖಿತ ಪರೀಕ್ಷೆಗೆ ಕರೆಯತಕ್ಕದ್ದು.<br><br>
ಸೇವೆಯಲ್ಲಿರುವ ಅಭ್ಯರ್ಥಿಗಳು:<br><br>
ಸೇವೆಯಲ್ಲಿರುವ ಅಭ್ಯರ್ಥಿಗಳು, ಕರ್ನಾಟಕ ರಾಜ್ಯ ಪೊಲೀಸಿನ ಯಾವುದೇ ವಿಭಾಗದಲ್ಲಿ ಅಸಿಸ್ಟೆಂಟ್ ಪೊಲೀಸ್ ಸಬ್‌ಇನ್ಸ್‌ಪೆಕ್ಟರ್‌ಗಳ (ಮಹಿಳೆ)/ ಹೆಡ್ ಕಾನ್ಸ್‌ಟೇಬಲ್‌ಗಳ (ಮಹಿಳೆ)/ಪೊಲೀಸ್ ಕಾನ್ಸ್‌ಟೇಬಲ್‌ಗಳ(ಮಹಿಳೆ) ವೃಂದದಲ್ಲಿ ಐದು ವರ್ಷಗಳಿಗಿಂತ ಕಡಿಮೆ ಇಲ್ಲದಂತೆ ಸೇವೆಯನ್ನು ಸಲ್ಲಿಸಿರಬೇಕು.<br><br>
ಲಿಖಿತ ಪರೀಕ್ಷೆ:<br><br>
ಇಂಗ್ಲೀಷ್ ಅಥವಾ ಕನ್ನಡದಲ್ಲಿ ಪದವಿ ಮಟ್ಟದ ಎರಡು ಪತ್ರಿಕೆಗಳಿರುವ ಒಂದು ಲಿಖಿತ ಪರೀಕ್ಷೆ ಇರತಕ್ಕದ್ದು.<br><br>
(ಎ) ಪತ್ರಿಕೆ–1: ಇದು ಎರಡು ಭಾಗಗಳನ್ನು ಹೊಂದಿರತಕ್ಕದ್ದು. ಮೊದಲ ಭಾಗವು ಮೂವತ್ತು (30) ಅಂಕಗಳುಳ್ಳ ಇಂಗ್ಲೀಷ್ ಅಥವಾ ಕನ್ನಡದಲ್ಲಿ ಪ್ರಬಂಧ ಬರೆಯುವುದನ್ನು ಮತ್ತು ಎರಡನೇ ಭಾಗವು ಇಪ್ಪತ್ತು ಅಂಕಗಳನ್ನುಳ್ಳ, ಇಂಗ್ಲೀಷಿನಿಂದ ಕನ್ನಡಕ್ಕೆ ಮತ್ತು ಕನ್ನಡದಿಂದ ಇಂಗ್ಲೀಷಿಗೆ, ವಾಕ್ಯ ವೃಂದಗಳನ್ನು ಭಾಷಾಂತರ ಮಾಡುವುದನ್ನು ಒಳಗೊಂಡಿರುತ್ತದೆ. ಪತ್ರಿಕೆ–I ಒಟ್ಟು ಐವತ್ತು ಅಂಕಗಳುಳ್ಳ ಒಂದು ಗಂಟೆಯ ಅವಧಿಯದ್ದಾಗಿರುತ್ತದೆ. ಕನಿಷ್ಠ ಅಂಕಗಳು ಎಂಬುದು ಇರುವುದಿಲ್ಲ.<br><br>
(ಬಿ) ಪತ್ರಿಕೆ–II: ಪ್ರಶ್ನೆಗಳು ಸಾಮಾನ್ಯ ಅಧ್ಯಯನದ ಪ್ರಶ್ನೆಗಳನ್ನು ಒಳಗೊಂಡಿದ್ದು –<br><br>
(i)ಸಾಮಾನ್ಯ ಜ್ಞಾನವು ಈ ಮುಂದಿನವುಗಳಿಗೆ ಸಂಬಂಧಿಸಿರುತ್ತದೆ:–
</td>
<td>
(ii) ಸಮೀಪ ದೃಷ್ಟಿ:–<br>
<table>
<tr><td>ಉತ್ತಮ ಕಣ್ಣು</td><td>ದೋಷಯುಕ್ತ ಕಣ್ಣು</td></tr>
<tr><td>0 / 6</td><td>0 / 8</td></tr>
</table>
(iii) ಪ್ರತಿಯೊಂದು ಕಣ್ಣು ಸಂಪೂರ್ಣ ಕ್ಷೇತ್ರ ದೃಷ್ಟಿ ಹೊಂದಿರಲೇಬೇಕು.<br><br>
ಬಣ್ಣ ಕುರುಡು, ಮೆಳ್ಳಗಣ್ಣು ಅಥವಾ ಯಾವುದೇ ರೋಗಸ್ಥಿತಿಯ ಕಣ್ಣುಗಳನ್ನು ಅಥವಾ ಕಣ್ಣಿನ ರೆಪ್ಪೆಗಳನ್ನು ಅನರ್ಹತೆ ಎಂದು ಭಾವಿಸತಕ್ಕದ್ದು.<br><br>
(ಬಿ) ಶ್ರವಣ ಪರೀಕ್ಷೆ :<br><br>
(i) ರಿನ್ನೆಸ್ ಟೆಸ್ಟ್<br>
(ii) ವೆಬ್ಬರ್ಸ್ ಟೆಸ್ಟ್<br>
(iii) ಟೆಸ್ಟ್ ಫಾರ್ ವೆರ್ಟಿಗೊ<br><br>
ಮೇಲೆ ಹೇಳಲಾದ ಪರೀಕ್ಷೆಗಳ ಅವಧಿಯಲ್ಲಿ ಯಾವುದೇ ನ್ಯೂನತೆಗಳು ಕಂಡುಬಂದಲ್ಲಿ ಅದನ್ನು ಅನರ್ಹತೆ ಎಂದು ಪರಿಗಣಿಸತಕ್ಕದ್ದು.<br><br>
(ಸಿ) ಈ ಕೆಳಗಿನ ಯಾವುದೇ ಒಂದು ನ್ಯೂನತೆಯು ಸಹ ದೈಹಿಕ ಅನರ್ಹತೆಯಾಗತಕ್ಕದ್ದು:–<br><br>
(i) ತಾಕು ಮಂಡಿಗಳು<br>
(ii) ಬಿಲ್ಲುಗಾಲುಗಳು<br>
(iii) ಚಪ್ಪಟೆ ಪಾದ<br>
(iv) ಗಂಟು ನರಗಳು<br>
(v) ಮಾತಿನಲ್ಲಿ ಉಗ್ಗು<br>
(ಡಿ) ಎದೆಯ ಎಕ್ಸರೆಯನ್ನು ಪರೀಕ್ಷೆ ಮಾಡಲು ತೆಗೆದುಕೊಳ್ಳತಕ್ಕದ್ದು.<br>
ಮೇಲಿನ ಎಲ್ಲಾ ಪರೀಕ್ಷೆಗಳನ್ನು ವೈದ್ಯಕೀಯ ಮಂಡಳಿಯು ನಡೆಸ ತಕ್ಕದ್ದು. ವೈದ್ಯಕೀಯ ಪರೀಕ್ಷೆಯಲ್ಲಿ ದೈಹಿಕವಾಗಿ
</td></tr>
</table>

| (1) | (2) | (3) | (4) | (5) | (6) | (7) |
|---|---|---|---|---|---|---|
| | | | | | (ಎ)ವಿಜ್ಞಾನ (ಬಿ)ಭೂಗೋಳ ಶಾಸ್ತ್ರ (ಸಿ)ಆಧುನಿಕ ಭಾರತ ಇತಿಹಾಸ; ರಾಷ್ಟ್ರೀಯ ಸ್ವಾತಂತ್ರ್ಯ ಚಳುವಳಿ (ಡಿ)ಭಾರತದ ಸಂವಿಧಾನ; ಮೂಲಭೂತ ಹಕ್ಕುಗಳು ಮತ್ತು ನಿರ್ದೇಶಕ ತತ್ವಗಳು<br><br>**(ii)**ಸಾಮಾನ್ಯ ಬೌದ್ಧಿಕ ಸಾಮರ್ಥ್ಯವು ಈ ಮುಂದಿನವುಗಳನ್ನು ಒಳಗೊಂಡಿರುತ್ತದೆ. (ಎ)ಗಣನಾ ಕೌಶಲ್ಯಗಳು (ಬಿ) ಸ್ಥಳಗಳನ್ನು ಗುರುತಿಸುವ ಕೌಶಲ್ಯಗಳು (ಸಿ)ಗ್ರಹಿಸುವಿಕೆ (ಡಿ)ತೀರ್ಪು ಮತ್ತು (ಇ) ನಿರ್ಣಯ ತೆಗೆದುಕೊಳ್ಳುವ ಸಾಮರ್ಥ್ಯ (ಎಫ್) ನೈತಿಕ ಶಿಕ್ಷಣ. ಇದು ಬಹು ಆಯ್ಕೆಯ ಉತ್ತರಗಳಿರುವ ಆಬ್ಜೆಕ್ಟಿವ್ ಪ್ರಶ್ನೆಗಳ ಮಾದರಿಯಲ್ಲಿದ್ದು ಒಂದು ಗಂಟೆ ಮೂವತ್ತು ನಿಮಿಷಗಳ ಅವಧಿಯದ್ದಾಗಿರತಕ್ಕದ್ದು. ಇದು ಒಂದು ನೂರ ಐವತ್ತು ಅಂಕಗಳನ್ನು ಹೊಂದಿರತಕ್ಕದ್ದು.<br><br>**ಮೌಖಿಕ ಪರೀಕ್ಷೆ:**<br><br>ಲಿಖಿತ ಪರೀಕ್ಷೆಯಲ್ಲಿ ಪಡೆದ ಅಂಕಗಳ ಆಧಾರದ ಮೇಲೆ, ಪ್ರತಿಯೊಂದು ಪ್ರವರ್ಗದ ಪ್ರತಿಯೊಂದು ಹುದ್ದೆಗೆ 1:2ರ ಅನುಪಾತದಲ್ಲಿ 10 ಅಂಕಗಳುಳ್ಳ ಮೌಖಿಕ ಪರೀಕ್ಷೆಗೆ ಅಭ್ಯರ್ಥಿಗಳು ಹಾಜರಾಗಲು ಅಗತ್ಯಪಡಿಸಲಾಗಿದೆ. ಕನಿಷ್ಠ ಅಂಕಗಳು ಎಂಬುದು ಇರತಕ್ಕದ್ದಲ್ಲ. ಲಿಖಿತ ಪರೀಕ್ಷೆ ಮತ್ತು ಸಂದರ್ಶನ ಇವುಗಳಲ್ಲಿ ಪಡೆದ ಅಂಕಗಳ ಆಧಾರದ ಮೇಲೆ ಖಾಲಿ ಹುದ್ದೆಗಳ ಸಂಖ್ಯೆಗೆ ಸಮನಾದ ಅಭ್ಯರ್ಥಿಗಳ ಒಂದು ತಾತ್ಕಾಲಿಕ ಆಯ್ಕೆ ಪಟ್ಟಿಯನ್ನು ಯಾವುದೇ ಕಾನೂನು, ನಿಯಮ ಅಥವಾ ಆದೇಶದಲ್ಲಿ ಉಪಬಂಧಿಸಿದ ಹುದ್ದೆಗಳ ಮೀಸಲಾತಿಯನ್ನು ಪರಿಗಣನೆಗೆ ತೆಗೆದುಕೊಂಡು ಆಯ್ಕೆ ಪ್ರಾಧಿಕಾರವು ಸಿದ್ಧಪಡಿಸತಕ್ಕದ್ದು. ತಾತ್ಕಾಲಿಕ ಆಯ್ಕೆ ಪಟ್ಟಿಯನ್ನು ಅಧಿಕೃತ ರಾಜ್ಯ ಪತ್ರದಲ್ಲಿ ಪ್ರಕಟಿಸತಕ್ಕದ್ದು.<br><br>ಹಾಗೆ ಸಿದ್ಧಪಡಿಸಲಾದ ಮತ್ತು ಪ್ರಕಟಿಸಲಾದ ಅಭ್ಯರ್ಥಿಗಳ ಅಂತಿಮ ಆಯ್ಕೆ ಪಟ್ಟಿಯನ್ನು, ಅಂಥ ಅಭ್ಯರ್ಥಿಗಳು ನೇಮಕಾತಿಗೆ ಎಲ್ಲ ರೀತಿಯಲ್ಲಿ ಸೂಕ್ತರಾಗಿದ್ದಾರೆಂದು ಮನವರಿಕೆ ಮಾಡಿಕೊಳ್ಳಲು ಅವಶ್ಯವಿರುವಂಥ ವಿಚಾರಣೆಯನ್ನು ಮಾಡಿದ ತರುವಾಯ, ಪಟ್ಟಿಯಲ್ಲಿ ಅವರ ಹೆಸರುಗಳು ಇರುವ ಕ್ರಮದಲ್ಲಿ, ನಿರ್ದಿಷ್ಟ ಪ್ರವರ್ಗದ ಹುದ್ದೆಗಳಲ್ಲಿ ಖಾಲಿ ಸ್ಥಾನಗಳಿಗೆ ನೇಮಕ ಮಾಡಲು ನೇಮಕಾತಿ ಪ್ರಾಧಿಕಾರಕ್ಕೆ ಕಳುಹಿಸತಕ್ಕದ್ದು. | ಸೂಕ್ತರಾಗಿದ್ದಾರೆಂದು ಪ್ರಮಾಣೀಕರಿಸಲ್ಪಡುವಂಥ ಅಭ್ಯರ್ಥಿಗಳನ್ನು ಮಾತ್ರ ನೇಮಕಾತಿಗಾಗಿ ಪರಿಗಣಿಸತಕ್ಕದ್ದು.<br><br>**VI. ತರಬೇತಿ:-**<br><br>ಆಯ್ಕೆಯಾದ ಅಭ್ಯರ್ಥಿಗಳು, ಡಿಜಿ ಮತ್ತು ಐಜಿಪಿಯವರು ಕಾಲಕಾಲಕ್ಕೆ ನಿಗದಿಪಡಿಸುವ ತರಬೇತಿಗೆ ಒಳಪಡತಕ್ಕದ್ದು. ಅವರು ತರಬೇತಿಯನ್ನು ಯಶಸ್ವಿಯಾಗಿ ಪೂರ್ಣಗೊಳಿಸದಿದ್ದಲ್ಲಿ, ನೇರ ನೇಮಕಾತಿ ಹೊಂದಿದವರು ಸೇವೆಯಿಂದ ವಜಾ ಗೊಳ್ಳಲು ಗುರಿಯಾಗತಕ್ಕದ್ದು. ಮತ್ತು ಸೇವೆಯಲ್ಲಿರುವ ಅಭ್ಯರ್ಥಿಗಳಾದರೆ, ಅವರುಗಳನ್ನು ಅವರ ಮೂಲ ದರ್ಜೆಗೆ ಮತ್ತು ವೇತನಕ್ಕೆ ಇಳಿಸಲಾಗುವುದು.<br><br>**VII. ಪ್ರೊಬೇಷನ್:-**<br><br>ಕರ್ನಾಟಕ ಸಿವಿಲ್ ಸೇವಾ (ಪ್ರೊಬೇಷನ್) ನಿಯಮಗಳು, 1977ರಲ್ಲಿ ಏನೇ ಇದ್ದರೂ, ನೇರನೇಮಕಾತಿಯ ಮತ್ತು ಸೇವೆಯಲ್ಲಿ ಇರುವ ಅಭ್ಯರ್ಥಿಗಳು, ತರಬೇತಿಯ ಅವಧಿಯೂ ಸೇರಿದಂತೆ, ಅವರು ಸೇವೆಗೆ ಸೇರಿದ ದಿನಾಂಕದಿಂದ ಎರಡು ವರ್ಷ ಆರು ತಿಂಗಳು ಪ್ರೊಬೇಷನ್‌ನಲ್ಲಿ ಇರತಕ್ಕದ್ದು.<br><br>**VIII. ಮುಂಬಡ್ತಿಗಾಗಿ:-**<br><br>ಅಸಿಸ್ಟೆಂಟ್ ರಿಸರ್ವ್ ಪೊಲೀಸ್ ಸಬ್ ಇನ್ಸ್‌ಪೆಕ್ಟರ್ (ಮಹಿಳೆ) ವೃಂದದಲ್ಲಿ ಐದು ವರ್ಷಗಳಿಗೆ ಕಡಿಮೆ ಇಲ್ಲದಂತೆ ಸೇವೆಯನ್ನು ಸಲ್ಲಿಸಿರತಕ್ಕದ್ದು:<br><br>ಪರಂತು, ಐದು ವರ್ಷಗಳಿಗೆ ಕಡಿಮೆ ಇಲ್ಲದಂತೆ ಸೇವೆಯನ್ನು ಸಲ್ಲಿಸಿದ ನೌಕರರು ಲಭ್ಯವಿರದಿದ್ದಲ್ಲಿ, ಮೂರು ವರ್ಷಗಳಿಗಿಂತ ಕಡಿಮೆ ಇಲ್ಲದಂತೆ ಸೇವೆಯನ್ನು ಸಲ್ಲಿಸಿರುವ ನೌಕರರನ್ನು ಮುಂಬಡ್ತಿಗಾಗಿ ಪರಿಗಣಿಸಬಹುದು. |

| (1) | (2) | (3) | (4) | (5) | (6) | (7) |
|---|---|---|---|---|---|---|
| **11** | **ಸ್ಪೆಷಲ್ ಅಸಿಸ್ಟೆಂಟ್ ರಿಸರ್ವ್ ಸಬ್–ಇನ್ಸ್‌ಪೆಕ್ಟರ್ (ಪುರುಷ)** <br> **(ರೂ.7275–13350)** | **104** | **–** | **104** | ಸ್ಪೆಷಲ್ ರಿಸರ್ವ್ ಹೆಡ್ ಕಾನ್ಸ್‌ಟೇಬಲ್‌ಗಳ (ಪುರುಷ) ವೃಂದದಿಂದ ಮುಂಬಡ್ತಿಯ ಮೂಲಕ | ಸ್ಪೆಷಲ್ ರಿಸರ್ವ್ ಪೊಲೀಸ್ ಹೆಡ್ ಕಾನ್ಸ್‌ಟೇಬಲ್‌ಗಳ (ಪುರುಷ) ವೃಂದದಲ್ಲಿ ಐದು ವರ್ಷಗಳಿಗೆ ಕಡಿಮೆ ಇಲ್ಲದಂತೆ ಸೇವೆಯನ್ನು ಸಲ್ಲಿಸಿರತಕ್ಕದ್ದು; <br> ಪರಂತು, ಐದು ವರ್ಷಗಳಿಗೆ ಕಡಿಮೆ ಇಲ್ಲದಂತೆ ಸೇವೆಯನ್ನು ಸಲ್ಲಿಸಿದ ನೌಕರರು ಲಭ್ಯವಿರದಿದ್ದಲ್ಲಿ, ಮೂರು ವರ್ಷಗಳಿಗಿಂತ ಕಡಿಮೆ ಇಲ್ಲದಂತೆ ಸೇವೆ ಸಲ್ಲಿಸಿರುವ ನೌಕರರನ್ನು ಮುಂಬಡ್ತಿಗಾಗಿ ಪರಿಗಣಿಸಬಹುದು. |
| **12** | **ಸ್ಪೆಷಲ್ ಅಸಿಸ್ಟೆಂಟ್ ರಿಸರ್ವ್ ಸಬ್–ಇನ್ಸ್‌ಪೆಕ್ಟರ್ (ಮಹಿಳೆ)** <br> **(ರೂ.7275–13350)** | 08 | – | 08 | ಸ್ಪೆಷಲ್ ರಿಸರ್ವ್ ಹೆಡ್ ಕಾನ್ಸ್‌ಟೇಬಲ್‌ಗಳ (ಮಹಿಳೆ) ವೃಂದದಿಂದ ಮುಂಬಡ್ತಿಯ ಮೂಲಕ | ಸ್ಪೆಷಲ್ ರಿಸರ್ವ್ ಪೊಲೀಸ್ ಹೆಡ್ ಕಾನ್ಸ್‌ಟೇಬಲ್‌ಗಳ(ಮಹಿಳೆ) ವೃಂದದಲ್ಲಿ ಐದು ವರ್ಷಗಳಿಗೆ ಕಡಿಮೆ ಇಲ್ಲದಂತೆ ಸೇವೆಯನ್ನು ಸಲ್ಲಿಸಿರತಕ್ಕದ್ದು. <br> ಪರಂತು, ಐದು ವರ್ಷಗಳಿಗೆ ಕಡಿಮೆ ಇಲ್ಲದಂತೆ ಸೇವೆಯನ್ನು ಸಲ್ಲಿಸಿದ ನೌಕರರು ಲಭ್ಯವಿರದಿದ್ದಲ್ಲಿ, ಮೂರು ವರ್ಷಗಳಿಗಿಂತ ಕಡಿಮೆ ಇಲ್ಲದಂತೆ ಸೇವೆ ಸಲ್ಲಿಸಿರುವ ನೌಕರರನ್ನು ಮುಂಬಡ್ತಿಗಾಗಿ ಪರಿಗಣಿಸಬಹುದು. |
| **13** | **ಸ್ಪೆಷಲ್ ರಿಸರ್ವ್ ಹೆಡ್ ಕಾನ್ಸ್‌ಟೇಬಲ್ (ಪುರುಷ)** <br> **(ರೂ.6250–12000)** | 2154 | – | 2154 | ಸ್ಪೆಷಲ್ ರಿಸರ್ವ್ ಪೊಲೀಸ್ ಕಾನ್ಸ್‌ಟೇಬಲ್‌ಗಳ (ಪುರುಷ) ವೃಂದದಿಂದ ಮುಂಬಡ್ತಿಯ ಮೂಲಕ | ಸ್ಪೆಷಲ್ ರಿಸರ್ವ್ ಪೊಲೀಸ್ ಕಾನ್ಸ್‌ಟೇಬಲ್‌ಗಳ (ಪುರುಷ) ವೃಂದದಲ್ಲಿ ಐದು ವರ್ಷಗಳಿಗೆ ಕಡಿಮೆ ಇಲ್ಲದಂತೆ ಸೇವೆಯನ್ನು ಸಲ್ಲಿಸಿರತಕ್ಕದ್ದು: <br> ಪರಂತು, ಐದು ವರ್ಷಗಳಿಗೆ ಕಡಿಮೆ ಇಲ್ಲದಂತೆ ಸೇವೆಯನ್ನು ಸಲ್ಲಿಸಿದ ನೌಕರರು ಲಭ್ಯವಿರದಿದ್ದಲ್ಲಿ, ಮೂರು ವರ್ಷಗಳಿಗಿಂತ ಕಡಿಮೆ ಇಲ್ಲದಂತೆ ಸೇವೆ ಸಲ್ಲಿಸಿರುವ ನೌಕರರನ್ನು ಮುಂಬಡ್ತಿಗಾಗಿ ಪರಿಗಣಿಸಬಹುದು. |
| **14** | **ಸ್ಪೆಷಲ್ ರಿಸರ್ವ್ ಹೆಡ್ ಕಾನ್ಸ್‌ಟೇಬಲ್ (ಮಹಿಳೆ)** <br> **(ರೂ.6250–12000)** | 42 | – | 42 | ಸ್ಪೆಷಲ್ ರಿಸರ್ವ್ ಪೊಲೀಸ್ ಕಾನ್ಸ್‌ಟೇಬಲ್‌ಗಳ (ಮಹಿಳೆ) ವೃಂದದಿಂದ ಮುಂಬಡ್ತಿಯ ಮೂಲಕ | ಸ್ಪೆಷಲ್ ರಿಸರ್ವ್ ಪೊಲೀಸ್ ಕಾನ್ಸ್‌ಟೇಬಲ್‌ಗಳ (ಮಹಿಳೆ) ವೃಂದದಲ್ಲಿ ಐದು ವರ್ಷಗಳಿಗೆ ಕಡಿಮೆ ಇಲ್ಲದಂತೆ ಸೇವೆಯನ್ನು ಸಲ್ಲಿಸಿರತಕ್ಕದ್ದು: <br> ಪರಂತು, ಐದು ವರ್ಷಗಳಿಗೆ ಕಡಿಮೆ ಇಲ್ಲದಂತೆ ಸೇವೆಯನ್ನು ಸಲ್ಲಿಸಿದ ನೌಕರರು ಲಭ್ಯವಿರದಿದ್ದಲ್ಲಿ, ಮೂರು ವರ್ಷಗಳಿಗಿಂತ ಕಡಿಮೆ ಇಲ್ಲದಂತೆ ಸೇವೆ ಸಲ್ಲಿಸಿರುವ ನೌಕರರನ್ನು ಮುಂಬಡ್ತಿಗಾಗಿ ಪರಿಗಣಿಸಬಹುದು. |
| **15.** | **ಸ್ಪೆಷಲ್ ರಿಸರ್ವ್ ಪೊಲೀಸ್ ಕಾನ್ಸ್‌ಟೇಬಲ್ (ಪುರುಷ)** <br> **(ರೂ.5800–10500)** | **8670** | **–** | **8670** | **ನೇರ ನೇಮಕಾತಿಯಿಂದ:–** <br> ನೇರ ನೇಮಕಾತಿಯ ಆಯ್ಕೆಯನ್ನು ಆಯ್ಕೆ ಪ್ರಾಧಿಕಾರವು ಮಾಡತಕ್ಕದ್ದು. | **I. ಶೈಕ್ಷಣಿಕ ಅರ್ಹತೆ:–** <br> ಎಸ್.ಎಸ್.ಎಲ್.ಸಿ.ಯಲ್ಲಿ ಉತ್ತೀರ್ಣರಾಗಿರ ಬೇಕು ಅಥವಾ ತತ್ಸಮಾನ ವಿದ್ಯಾರ್ಹತೆಯನ್ನು ಹೊಂದಿರಬೇಕು. |

| (1) | (2) | (3) | (4) | (5) | (6) | (7) |
|---|---|---|---|---|---|---|
| | | | | | **ಆಯ್ಕೆ ಪ್ರಾಧಿಕಾರವು ಈ ಕೆಳಕಂಡವರನ್ನು ಒಳಗೊಂಡಿರತಕ್ಕದ್ದು:–**<br>(1) ಡೆಪ್ಯೂಟಿ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕೆ.ಎಸ್.ಆರ್.ಪಿ. ಅಥವಾ ಡಿಜಿ ಮತ್ತು ಐಜಿಪಿಯವರಿಂದ ನಾಮ ನಿರ್ದೇಶನಗೊಂಡ ಡೆಪ್ಯೂಟಿ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್‌ರವರ ದರ್ಜೆಗಿಂತ ಕಡಿಮೆ ಇಲ್ಲದ ದರ್ಜೆಯ ಒಬ್ಬ ಅಧಿಕಾರಿ<br>– ಅಧ್ಯಕ್ಷರು<br>(2) ಅಡಿಷನಲ್ ಡೈರೆಕ್ಟರ್ ಜನರಲ್ ಆಫ್ ಪೊಲೀಸ್, ಕೆ.ಎಸ್.ಆರ್.ಪಿ. ಇವರಿಂದ ನಾಮನಿರ್ದೇಶಿತರಾದ ಒಬ್ಬ ಬೆಟಾಲಿಯನ್ ಕಮಾಂಡೆಂಟ್<br>– ಸದಸ್ಯರು<br>(3) ಸಮಾಜ ಕಲ್ಯಾಣ ಇಲಾಖೆಯ ನಿರ್ದೇಶಕರು ನಾಮನಿರ್ದೇಶಿಸಿದ ಉಪ ನಿರ್ದೇಶಕರ ದರ್ಜೆಗಿಂತ ಕಡಿಮೆ ಇಲ್ಲದ ದರ್ಜೆಯ ಒಬ್ಬ ಅಧಿಕಾರಿ<br>– ಸದಸ್ಯರು<br>(4) ಹಿಂದುಳಿದ ವರ್ಗಗಳ ನಿರ್ದೇಶಕರು ನಾಮನಿರ್ದೇಶಿಸಿದ ಉಪ ನಿರ್ದೇಶಕರ ದರ್ಜೆಗಿಂತ ಕಡಿಮೆ ಇಲ್ಲದ ದರ್ಜೆಯ ಒಬ್ಬ ಅಧಿಕಾರಿ<br>– ಸದಸ್ಯರು<br>(5) ಅಲ್ಪ ಸಂಖ್ಯಾತರ ಕಲ್ಯಾಣ ಇಲಾಖೆಯ ನಿರ್ದೇಶಕರು ನಾಮನಿರ್ದೇಶಿಸಿದ ಉಪ ನಿರ್ದೇಶಕರ ದರ್ಜೆಗಿಂತ ಕಡಿಮೆ ಇಲ್ಲದ ದರ್ಜೆಯ ಒಬ್ಬ ಅಧಿಕಾರಿ.<br>– ಸದಸ್ಯರು<br>(6) ಸಹಾಯಕ ಆಡಳಿತಾಧಿಕಾರಿ, ಕೆ.ಎಸ್.ಆರ್.ಪಿ.<br>– ಸದಸ್ಯ ಕಾರ್ಯದರ್ಶಿ<br>ಪರಂತು, ಇಂಡಿಯಾ ರಿಸರ್ವ್ ಬೆಟಾಲಿಯನ್‌ಗೆ ನೇಮಕಾತಿ ಮಾಡುವುದಕ್ಕೆ ಸಂಬಂಧಿಸಿದಂತೆ, ಆಯ್ಕೆ ಸಮಿತಿಯ ಮೇಲ್ಕಂಡ ಸದಸ್ಯರ ಜೊತೆಗೆ ಕೇಂದ್ರ ಪೊಲೀಸ್ ದಳದ ಕಮಾಂಡೆಂಟರ ದರ್ಜೆಗಿಂತ ಕಡಿಮೆಯಲ್ಲದ ದರ್ಜೆಯ ಒಬ್ಬ ಅಧಿಕಾರಿ ಇರತಕ್ಕದ್ದು. | **II. ವಯೋಮಿತಿ:–**<br>ಕರ್ನಾಟಕ ಸಿವಿಲ್ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು, 1977ರ 6ನೇ ನಿಯಮದಲ್ಲಿ ಏನೇ ಇದ್ದಾಗ್ಯೂ, ಹದಿನೆಂಟು (18) ವರ್ಷ ವಯಸ್ಸು ಪೂರ್ಣಗೊಂಡಿರಬೇಕು. ಆದರೆ–<br>**(i)** ಪರಿಶಿಷ್ಟ ಜಾತಿಗಳು, ಪರಿಶಿಷ್ಟ ಪಂಗಡಗಳು ಅಥವಾ ಇತರೆ ಹಿಂದುಳಿದ ವರ್ಗಗಳ ಪ್ರಕರಣಗಳಲ್ಲಿ ಇಪ್ಪತ್ತೇಳು ವರ್ಷಗಳು ಪೂರ್ಣಗೊಂಡಿರಬಾರದು.<br>**(ii)** ಇತರರ ಪ್ರಕರಣಗಳಲ್ಲಿ ಇಪ್ಪತ್ತೈದು ವರ್ಷಗಳು ಪೂರ್ಣಗೊಂಡಿರಬಾರದು:<br>ಪರಂತು, ಸೇವೆಯಿಂದ ಬಿಡುಗಡೆ ಹೊಂದಿದ, ಸೇವಾ ಕಡಿತ ಅಥವಾ ಸೇವಾ ನಿವೃತ್ತಿ ಕಾರಣದಿಂದ ಬಿಡುಗಡೆಯಾದ ಮಾಜಿ ಸೈನಿಕ ಅಭ್ಯರ್ಥಿಗಳ ಪ್ರಕರಣದಲ್ಲಿ, ವಯೋಮಿತಿಯು ಆತನು ಮಿಲಿಟರಿಯಲ್ಲಿ ಸಲ್ಲಿಸಿರುವ ಸೇವಾ ವರ್ಷಗಳ ಜೊತೆಗೆ ಮೂರು ವರ್ಷಗಳು ಹೆಚ್ಚಾಗಿರತಕ್ಕದ್ದು. ಆದಾಗ್ಯೂ, ಯಾರೇ ಮಾಜಿ ಸೈನಿಕನು ಸರ್ಕಾರದ ಯಾವುದೇ ಸೇವೆಯಲ್ಲಿ ಈ ಮೊದಲೇ ಈ ಸವಲತ್ತನ್ನು ಪಡೆದುಕೊಂಡಿದ್ದಲ್ಲಿ, ಈ ನಿಯಮಗಳ ಅಡಿಯಲ್ಲಿ ಪುನ: ಈ ಸೌಲಭ್ಯವನ್ನು ಪಡೆಯಲು ಅರ್ಹನಾಗಿರತಕ್ಕದ್ದಲ್ಲ.<br>**III. ದೈಹಿಕ ಸಹನೆ ಪರೀಕ್ಷೆ:–**<br>**ಎ) ನೇರ ನೇಮಕಾತಿಗೆ:**<br>(i) ಅಭ್ಯರ್ಥಿಗಳು ಎರಡು ಕಿಲೋಮೀಟರ್ ಗಳನ್ನು ಹತ್ತು ನಿಮಿಷಗಳಲ್ಲಿ ಓಡಬೇಕು.<br>(ii) **ಉದ್ದ ಜಿಗಿತ ಅಥವಾ ಎತ್ತರ ಜಿಗಿತ**<br>**ಉದ್ದ ಜಿಗಿತ–** 3.80 ಮೀಟರುಗಳಿಗಿಂತ ಕಡಿಮೆ ಇಲ್ಲದಷ್ಟು.<br>**ಎತ್ತರ ಜಿಗಿತ–** 1.20 ಮೀಟರುಗಳಿಗಿಂತ ಕಡಿಮೆ ಇಲ್ಲದಷ್ಟು<br>ಅಭ್ಯರ್ಥಿಗಳು ಯಾವುದೇ ಒಂದು ಜಿಗಿತವನ್ನು ಅಥವಾ ಎರಡೂ ಜಿಗಿತಗಳನ್ನು ಮಾಡಲು ಆಯ್ಕೆ ಮಾಡಿಕೊಳ್ಳಬಹುದು. ಆದರೆ, ಅವರು ಅವುಗಳ ಪೈಕಿ ಕೊನೇ ಪಕ್ಷ ಯಾವುದಾದರೂ ಒಂದರಲ್ಲಿ ಅರ್ಹತೆ ಗಳಿಸಬೇಕು (ಗರಿಷ್ಠ 3 ಅವಕಾಶಗಳಲ್ಲಿ)<br>(iii) **ಗುಂಡು ಎಸೆತ:** (7.26 ಕಿ.ಗ್ರಾಂ) 5.60 ಮೀಟರುಗಳಿಗೆ ಕಡಿಮೆ ಇಲ್ಲದಷ್ಟು |

| (1) | (2) | (3) | (4) | (5) | (6) | (7) |
|---|---|---|---|---|---|---|
| | | | | | ನೇಮಕಾತಿಗಳನ್ನು ಮಾಡುವುದು, ಅರ್ಜಿಗಳ ಪರಿಶೀಲನೆ ಮತ್ತು ಸಾಮಾನ್ಯ ಲಿಖಿತ ಪರೀಕ್ಷೆಯ ಮೌಲ್ಯ ಮಾಪನ ಇವುಗಳನ್ನು ಪೊಲೀಸ್ ಕಾನ್ಸ್‌ಟೇಬಲ್‌ಗಳ ನೇಮಕಾತಿ ಸಮನ್ವಯಾಧಿಕಾರಿಯಾಗಿ ಡಿಐಜಿಪಿ, ನೇಮಕಾತಿ, ಇವರು ಮಾಡತಕ್ಕದ್ದು.<br><br>ಭರ್ತಿ ಮಾಡಬೇಕಾದ ಖಾಲಿ ಹುದ್ದೆಗಳ ಸಂಖ್ಯೆಗೆ ಸಂಬಂಧಿಸಿದಂತೆ ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ ಅವರಿಂದ ಪೂರ್ವಾನುಮೋದನೆ ಪಡೆದ ತರುವಾಯ, ಸಂಬಂಧಪಟ್ಟ ಜಿಲ್ಲೆಯ ಆಯ್ಕೆ ಪ್ರಾಧಿಕಾರವು ಅಧಿಕೃತ ರಾಜ್ಯಪತ್ರದಲ್ಲಿ ಅಧಿಸೂಚನೆ ಹೊರಡಿಸಿ ವ್ಯಾಪಕ ಪ್ರಚಾರ ನೀಡುವ ಮೂಲಕ ಆಯ್ಕೆ ಪ್ರಾಧಿಕಾರವು ನಿರ್ದಿಷ್ಟ ಪಡಿಸಬಹುದಾದಂಥ ನಮೂನೆಯಲ್ಲಿ ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಅಹ್ವಾನಿಸತಕ್ಕದ್ದು ಮತ್ತು ವ್ಯಾಪಕ ಪ್ರಸಾರವುಳ್ಳ ನಾಲ್ಕಕ್ಕಿಂತ ಕಡಿಮೆ ಇಲ್ಲದ ಪ್ರಮುಖ ದಿನಪತ್ರಿಕೆಗಳಲ್ಲಿ, (ಅವುಗಳ ಪೈಕಿ ಕನಿಷ್ಠ ಪಕ್ಷ ಒಂದು ಕನ್ನಡ ದಿನಪತ್ರಿಕೆಯಾಗಿರಬೇಕು) ಜಾಹೀರಾತನ್ನು ಸಹ ನೀಡತಕ್ಕದ್ದು. ಈ ಬಗ್ಗೆ ಆಕಾಶವಾಣಿ ಮತ್ತು ದೂರದರ್ಶನದಲ್ಲಿ ಸಹ ಪ್ರಚಾರ ನೀಡತಕ್ಕದ್ದು.<br><br>ಸದರಿ ಅಧಿಸೂಚನೆಗೆ ಅನುಸಾರವಾಗಿ ಸಲ್ಲಿಸಲಾಗುವ ಅರ್ಜಿಗಳನ್ನು ಸ್ವೀಕರಿಸಿದ ತರುವಾಯ, ಆಯ್ಕೆ ಪ್ರಾಧಿಕಾರವು ಅರ್ಹ ಅಭ್ಯರ್ಥಿಗಳ ಒಂದು ಪಟ್ಟಿಯನ್ನು ಸಿದ್ಧಪಡಿಸತಕ್ಕದ್ದು ಮತ್ತು ಕಾಲಾನುಕ್ರಮಣಿಕೆ ಪ್ರಕಾರ ನಡೆಸಲಾಗುವ ಈ ಮುಂದಿನ ಪರೀಕ್ಷೆಗಳಲ್ಲಿ ಅಭ್ಯರ್ಥಿಗಳ ಸಾಧನೆಯ ಆಧಾರದ ಮೇಲೆ ಆಯ್ಕೆಯನ್ನು ಮಾಡತಕ್ಕದ್ದು:–<br><br>**ದೈಹಿಕ ಸಹನೆ ಪರೀಕ್ಷೆ:–**<br><br>ಅಭ್ಯರ್ಥಿಗಳು ಮೊದಲು ದೈಹಿಕ ಸಹನೆ ಪರೀಕ್ಷೆಗೆ ಹಾಜರಾಗತಕ್ಕದ್ದು. ದೈಹಿಕ ಸಹನೆ ಪರೀಕ್ಷೆಯು ಕೇವಲ ಅರ್ಹತಾ ಪರೀಕ್ಷೆಯಾಗಿರುತ್ತದೆ. ದೈಹಿಕ ಸಹನೆ ಪರೀಕ್ಷೆಯಲ್ಲಿ ಅರ್ಹರಾದವರು ಮಾತ್ರ ದೈಹಿಕ ಗುಣಮಟ್ಟಗಳ ಪರೀಕ್ಷೆಗೆ ಹಾಜರಾಗತಕ್ಕದ್ದು. | **ಬಿ) ಮಾಜಿ ಸೈನಿಕ ಅಭ್ಯರ್ಥಿಗಳಿಗೆ:**<br><br>(i) ಅಭ್ಯರ್ಥಿಗಳು ನಾಲ್ಕು ನೂರು ಮೀಟರ್‌ಗಳನ್ನು ಎರಡು ನಿಮಿಷಗಳಲ್ಲಿ ಓಡಬೇಕು.<br><br>(ii) **ಉದ್ದ ಜಿಗಿತ ಅಥವಾ ಎತ್ತರ ಜಿಗಿತ**<br><br>**ಉದ್ದ ಜಿಗಿತ–** 2.50 ಮೀಟರುಗಳಿಗೆ ಕಡಿಮೆ ಇಲ್ಲದಷ್ಟು.<br><br>**ಎತ್ತರ ಜಿಗಿತ–** 0.90 ಮೀಟರಿಗೆ ಕಡಿಮೆ ಇಲ್ಲದಷ್ಟು.<br><br>ಅಭ್ಯರ್ಥಿಗಳು ಯಾವುದೇ ಒಂದು ಜಿಗಿತವನ್ನು ಅಥವಾ ಎರಡೂ ಜಿಗಿತಗಳನ್ನು ಮಾಡಲು ಆಯ್ಕೆ ಮಾಡಿಕೊಳ್ಳಬಹುದು. ಆದರೆ, ಅವರು ಅವುಗಳ ಪೈಕಿ ಕೊನೇ ಪಕ್ಷ ಯಾವುದಾದರೂ ಒಂದರಲ್ಲಿ ಅರ್ಹತೆ ಗಳಿಸಬೇಕು (ಗರಿಷ್ಠ 3 ಅವಕಾಶಗಳಲ್ಲಿ)<br><br>(iii) **ಗುಂಡು ಎಸೆತ** (4.00 ಕಿ.ಗ್ರಾಂ) 3.75 ಮೀಟರುಗಳಿಗೆ ಕಡಿಮೆ ಇಲ್ಲದಷ್ಟು<br><br>ಮಾಜಿ ಸೈನಿಕ ಅಭ್ಯರ್ಥಿಗಳೂ ಸೇರಿ ದೈಹಿಕ ಗುಣಮಟ್ಟ ಪರೀಕ್ಷೆಗೆ ಅರ್ಹತೆ ಗಳಿಸಲು ಕಲಾನುಕ್ರಮಣಿಕೆಯಲ್ಲಿ ನಡೆಯುವ ಮೇಲ್ಕಂಡ ಎಲ್ಲ 3 ಪರೀಕ್ಷೆಗಳಲ್ಲೂ ಅರ್ಹರಾಗಬೇಕು.<br><br>**IV. ದೈಹಿಕ ಗುಣಮಟ್ಟ ಪರೀಕ್ಷೆ:–**<br><br>**(ಎ) ಎತ್ತರ:** 170 ಸೆಂ.ಮೀ.ಗಿಂತ ಕಡಿಮೆ ಇರಬಾರದು (ಮಾಜಿ ಸೈನಿಕ ಅಭ್ಯರ್ಥಿಗಳಿಗೆ ಇದು ಅನ್ವಯವಾಗುವುದಿಲ್ಲ.)<br><br>**(ಬಿ) ಎದೆ:** ಕನಿಷ್ಠ 5 ಸೆಂ.ಮೀ.ಗಳ ಹಿಗ್ಗಿಸುವಿಕೆಯ ಜೊತೆಗೆ ಪೂರ್ಣವಾಗಿ ಹಿಗ್ಗಿಸಿದಾಗ 86 ಸೆಂ.ಮೀ.ಗಿಂತ ಕಡಿಮೆ ಇರತಕ್ಕದ್ದಲ್ಲ.<br><br>**V. ವೈದ್ಯಕೀಯ ಪರೀಕ್ಷೆ:–**<br><br>ತಾತ್ಕಾಲಿಕ ಆಯ್ಕೆ ಪಟ್ಟಿಯನ್ನು ಪ್ರಕಟಿಸಿದ ನಂತರ, ತಾತ್ಕಾಲಿಕ ಆಯ್ಕೆ ಪಟ್ಟಿಯಲ್ಲಿ ಇರುವ ಅಭ್ಯರ್ಥಿಗಳು, ಆಯ್ಕೆ ಪ್ರಾಧಿಕಾರವು ನಿಗದಿಪಡಿಸಿದ ಸಮಯ ಮತ್ತು ಸ್ಥಳದಲ್ಲಿ ವೈದ್ಯಕೀಯ ಪರೀಕ್ಷೆಗಾಗಿ ವೈದ್ಯಕೀಯ ಮಂಡಳಿಯ ಮುಂದೆ ಹಾಜರಾಗತಕ್ಕದ್ದು.<br><br>ವೈದ್ಯಕೀಯ ಪರೀಕ್ಷೆಯು ಈ ಕೆಳಗಿನವುಗಳನ್ನು ಒಳಗೊಂಡಿರತಕ್ಕದ್ದು: |

<table>
<tr><th>(1)</th><th>(2)</th><th>(3)</th><th>(4)</th><th>(5)</th><th>(6)</th><th>(7)</th></tr>
<tr><td></td><td></td><td></td><td></td><td></td>
<td>
ದೈಹಿಕ ಗುಣಮಟ್ಟಗಳ ಪರೀಕ್ಷೆ:–<br>
ದೈಹಿಕ ಸಹನೆ ಪರೀಕ್ಷೆಯಲ್ಲಿ ಅರ್ಹರಾದವರು ಮಾತ್ರ ದೈಹಿಕ ಗುಣಮಟ್ಟದ ಪರೀಕ್ಷೆಗೆ ಹಾಜರಾಗತಕ್ಕದ್ದು. ನಿಗದಿಪಡಿಸಲಾದ ದೈಹಿಕ ಗುಣಮಟ್ಟಗಳನ್ನು ಹೊಂದಿಲ್ಲದವರನ್ನು ಅನರ್ಹಗೊಳಿಸತಕ್ಕದ್ದು.<br>
ಪ್ರತಿಯೊಂದು ಜಿಲ್ಲೆಗೆ ಸಂಬಂಧಿಸಿದಂತೆ ದೈಹಿಕ ಸಹನೆ ಪರೀಕ್ಷೆಯನ್ನು ಮತ್ತು ದೈಹಿಕ ಗುಣಮಟ್ಟ ಪರೀಕ್ಷೆಯನ್ನು ಪೊಲೀಸ್ ಡೆಪ್ಯೂಟಿ ಇನ್ಸ್‌ಪೆಕ್ಟರ್ ಜನರಲ್, ಕೆಎಸ್‌ಆರ್‌ಪಿ (ಅಧ್ಯಕ್ಷರು) ಮತ್ತು ಇತರ ಇಬ್ಬರು ಸದಸ್ಯರಿರುವ (ಡಿ.ಜಿ ಮತ್ತು ಐಜಿಪಿ ಅವರು ನಾಮ ನಿರ್ದೇಶಿಸಿದ ಕಮಾಂಡೆಂಟರು ಇರುವ) ಸಮಿತಿಯು ನಡೆಸತಕ್ಕದ್ದು.<br>
ಟಿಪ್ಪಣಿ–(1):– ಈ ಮುಂದಿನ ಎರಡು ಪರೀಕ್ಷೆಗಳ ಪೈಕಿ ಯಾವುದೇ ಪರೀಕ್ಷೆಗೆ, ಎಂದರೆ– ದೈಹಿಕ ಸಹನೆ, ದೈಹಿಕ ಗುಣಮಟ್ಟಗಳ ಪರೀಕ್ಷೆಗಳಿಗೆ ಗೈರು ಹಾಜರಾಗುವ ಅಭ್ಯರ್ಥಿಗಳನ್ನು ಅನರ್ಹಗೊಳಿಸತಕ್ಕದ್ದು.<br>
ಟಿಪ್ಪಣಿ–(2):– ದೈಹಿಕ ಸಹನೆ ಮತ್ತು ದೈಹಿಕ ಗುಣಮಟ್ಟಗಳ ಪರೀಕ್ಷೆಗಳಲ್ಲಿ ಅರ್ಹರಾಗುವ ಅಭ್ಯರ್ಥಿಗಳನ್ನು ಲಿಖಿತ ಪರೀಕ್ಷೆಗೆ ಕರೆಯತಕ್ಕದ್ದು.<br>
ಲಿಖಿತ ಪರೀಕ್ಷೆ:–<br>
ಎಲ್ಲ ಪರೀಕ್ಷೆಗಳಲ್ಲಿ ಎಂದರೆ, ದೈಹಿಕ ಸಹನೆ ಪರೀಕ್ಷೆ ಮತ್ತು ದೈಹಿಕ ಗುಣಮಟ್ಟಗಳ ಪರೀಕ್ಷೆಗಳಲ್ಲಿ ಅರ್ಹರಾದಂತಹವರು ಕನ್ನಡ ಅಥವಾ ಇಂಗ್ಲೀಷಿನ ಲಿಖಿತ ಪರೀಕ್ಷೆಗೆ ಹಾಜರಾಗತಕ್ಕದ್ದು. ಪರೀಕ್ಷೆಯು ನೂರು ಅಂಕಗಳನ್ನು ಹೊಂದಿರತಕ್ಕದ್ದು. ಬಹು ಆಯ್ಕೆಯ ಉತ್ತರಗಳುಳ್ಳ ಆಬ್ಜೆಕ್ಟಿವ್ ಮಾದರಿಯ ಪ್ರಶ್ನೆಗಳು–<br>
(1) ಸಾಮಾನ್ಯ ಅಧ್ಯಯನಗಳು; ಮತ್ತು (2) ಬೌದ್ಧಿಕ ಸಾಮರ್ಥ್ಯಕ್ಕೆ ಸಂಬಂಧಿಸಿರುತ್ತದೆ.<br>
ಸಾಮಾನ್ಯ ಅಧ್ಯಯನವು ಸಾಮಾನ್ಯ ಜ್ಞಾನ, ವಿಜ್ಞಾನ, ನೈತಿಕ ಶಿಕ್ಷಣ ಭೂಗೋಳ, ಆಧುನಿಕ ಭಾರತದ ಇತಿಹಾಸ; ರಾಷ್ಟ್ರೀಯ ಸ್ವಾತಂತ್ರ್ಯ ಚಳುವಳಿ, ಭಾರತದ ಸಂವಿಧಾನ; ಮೂಲಭೂತ ಹಕ್ಕುಗಳು ಮತ್ತು ನಿರ್ದೇಶಕ ತತ್ವಗಳು ಇವುಗಳನ್ನು ಒಳಗೊಂಡಿರುತ್ತದೆ. ಸಾಮಾನ್ಯ ಬೌದ್ಧಿಕ ಸಾಮರ್ಥ್ಯವು ಗಣನಾ ಕೌಶಲ್ಯಗಳು ಮತ್ತು ಸ್ಥಳಗಳನ್ನು
</td>
<td>
(ಎ) ದೃಷ್ಟಿ:–<br>
ಕನ್ನಡಕ ಸಹಿತ ಅಥವಾ ಕನ್ನಡಕ ಇಲ್ಲದೆ ದೂರ ಮತ್ತು ಸಮೀಪ ದೃಷ್ಟಿಯನ್ನು ಈ ಕೆಳಗಿನ ಪ್ರಮಾಣದಲ್ಲಿ ಹೊಂದಿರಬೇಕು.<br>
(i) ದೂರದೃಷ್ಟಿ:–
<table>
<tr><td>ಉತ್ತಮ ಕಣ್ಣು</td><td>ದೋಷಯುಕ್ತ ಕಣ್ಣು</td></tr>
<tr><td>6 / 9</td><td>6 / 9</td></tr>
<tr><td>6 / 9</td><td>6 / 12</td></tr>
</table>
(ii) ಸಮೀಪ ದೃಷ್ಟಿ:–
<table>
<tr><td>ಉತ್ತಮ ಕಣ್ಣು</td><td>ದೋಷಯುಕ್ತ ಕಣ್ಣು</td></tr>
<tr><td>0/6</td><td>0 / 8</td></tr>
</table>
(iii) ಪ್ರತಿ ಕಣ್ಣು ಸಂಪೂರ್ಣ ಕ್ಷೇತ್ರ ದೃಷ್ಟಿ ಹೊಂದಿರಬೇಕು.<br>
ಬಣ್ಣ ಕುರುಡು, ಮೆಳ್ಳಗಣ್ಣು ಅಥವಾ ಯಾವುದೇ ರೋಗಗ್ರಸ್ತಸ್ಥಿತಿಯ ಕಣ್ಣುಗಳನ್ನು ಅಥವಾ ಯಾವುದೇ ಕಣ್ಣಿನ ರೆಪ್ಪೆಗಳನ್ನು ಅನರ್ಹತೆ ಎಂದು ಭಾವಿಸತಕ್ಕದ್ದು.<br>
(ಬಿ) ಶ್ರವಣ ಪರೀಕ್ಷೆಗಳು :–<br>
(i) ರಿನ್ನೆಸ್ ಟೆಸ್ಟ್<br>
(ii) ವೆಬ್ಬರ್ಸ್ ಟೆಸ್ಟ್<br>
(iii) ಟೆಸ್ಟ್ ಫಾರ್ ವೆರ್ಟಿಗೊ<br>
ಮೇಲೆ ಹೇಳಲಾದ ಪರೀಕ್ಷೆಗಳ ಅವಧಿಯಲ್ಲಿ ಯಾವುದೇ ನ್ಯೂನತೆಗಳು ಕಂಡುಬಂದಲ್ಲಿ, ಅದನ್ನು ಅನರ್ಹತೆ ಎಂದು ಭಾವಿಸತಕ್ಕದ್ದು.<br>
(ಸಿ) ಈ ಕೆಳಗಿನ ಯಾವುದೇ ಒಂದು ನ್ಯೂನತೆಯು ದೈಹಿಕ ಅನರ್ಹತೆ ಯಾಗತಕ್ಕದ್ದು:<br>
(i) ತಾಕು ಮಂಡಿಗಳು
</td></tr>
</table>

| (1) | (2) | (3) | (4) | (5) | (6) | (7) |
|---|---|---|---|---|---|---|
| | | | | | ಗುರುತಿಸುವ ಕೌಶಲ್ಯಗಳನ್ನು ಒಳಗೊಂಡಿರುತ್ತದೆ. ಪರೀಕ್ಷೆಯು ಎರಡು ಗಂಟೆಯ ಅವಧಿಯದ್ದಾಗಿರತಕ್ಕದ್ದು.<br>ಆಯ್ಕೆ ಪ್ರಾಧಿಕಾರವು ನಡೆಸಿದ ಅರ್ಹತಾ ಪರೀಕ್ಷೆಯಲ್ಲಿ ಮತ್ತು ಲಿಖಿತ ಪರೀಕ್ಷೆಯಲ್ಲಿ ಅಭ್ಯರ್ಥಿಗಳು ಪಡೆದ ಶೇಕಡಾವಾರು ಅಂಕಗಳನ್ನು ಸೇರಿಸಿ, ಆಯ್ಕೆ ಪ್ರಾಧಿಕಾರವು ಒಂದು ಅರ್ಹತಾ ಪಟ್ಟಿಯನ್ನು ಸಿದ್ಧಪಡಿಸತಕ್ಕದ್ದು.<br>ಯಾವುದೇ ಕಾನೂನು, ನಿಯಮ ಅಥವಾ ಆದೇಶದ ಮೇರೆಗೆ ಉಪಬಂಧಿಸಲಾದ ಮೀಸಲಾತಿಯನ್ನು ಗಣನೆಗೆ ತೆಗೆದುಕೊಂಡ ತರುವಾಯ, ಪ್ರತಿಯೊಂದು ಪ್ರವರ್ಗದಲ್ಲಿ ಮತ್ತು ಸಮೂಹದಲ್ಲಿ ಅಧಿಸೂಚಿಸಲಾದ ಖಾಲಿ ಹುದ್ದೆಗಳ ಸಂಖ್ಯೆಗೆ ಸಮನಾಗಿರುವಂತೆ, ಅಭ್ಯರ್ಥಿಗಳ ಅರ್ಹತಾ ಕ್ರಮದಲ್ಲಿ ಒಂದು ತಾತ್ಕಾಲಿಕ ಆಯ್ಕೆಪಟ್ಟಿಯನ್ನು ತಯಾರಿಸತಕ್ಕದ್ದು ಮತ್ತು ಪ್ರಕಟಿಸತಕ್ಕದ್ದು.<br>ತಾತ್ಕಾಲಿಕ ಆಯ್ಕೆ ಪಟ್ಟಿಯಲ್ಲಿ ಸೇರಿಸಿರುವ ಅಭ್ಯರ್ಥಿಗಳು ಆಯ್ಕೆ ಪ್ರಾಧಿಕಾರವು ಗೊತ್ತುಪಡಿಸಿದ ಸಮಯ ಮತ್ತು ಸ್ಥಳದಲ್ಲಿ ವೈದ್ಯಕೀಯ ಪರೀಕ್ಷೆಗಾಗಿ ವೈದ್ಯಕೀಯ ಮಂಡಳಿಯ ಮುಂದೆ ಹಾಜರಾಗತಕ್ಕದ್ದು.<br>**ನೇಮಕಾತಿ:–**<br>ವೈದ್ಯಕೀಯ ಮಂಡಳಿಯಿಂದ ವೈದ್ಯಕೀಯ ಪರೀಕ್ಷೆ ಆದ ನಂತರ, ಆಯ್ಕೆ ಪ್ರಾಧಿಕಾರವು ಅಂತಿಮ ಆಯ್ಕೆ ಪಟ್ಟಿಯನ್ನು ಸಿದ್ಧಪಡಿಸತಕ್ಕದ್ದು ಮತ್ತು ಅದನ್ನು ಪ್ರಕಟಿಸತಕ್ಕದ್ದು.<br>ಬ್ಯಾಟಲಿಯನ್‌ಗಳಿಗೆ ಅಭ್ಯರ್ಥಿಗಳ ಹಂಚಿಕೆಯನ್ನು ವಿವಿಧ ಪ್ರವರ್ಗಗಳ ಅಡಿಯಲ್ಲಿ ಲಭ್ಯವಿರುವ ಖಾಲಿ ಸ್ಥಾನಗಳು, ಅಭ್ಯರ್ಥಿಯ ಅರ್ಹತೆ ಮತ್ತು ಆದ್ಯತೆಯನ್ನು ಆಧರಿಸಿ ಮಾಡತಕ್ಕದ್ದು.<br>ಹಾಗೆ ಸಿದ್ಧಪಡಿಸಿದ ಮತ್ತು ಪ್ರಕಟಿಸಿದ ಅಭ್ಯರ್ಥಿಗಳ ಅಂತಿಮ ಆಯ್ಕೆ ಪಟ್ಟಿಯನ್ನು, ಅಂಥ ಅಭ್ಯರ್ಥಿಗಳು ನೇಮಕಾತಿಗೆ ಎಲ್ಲ ರೀತಿಯಲ್ಲೂ ಸೂಕ್ತ ರಾಗಿದ್ದಾರೆಂದು ಮನವರಿಕೆ ಮಾಡಿಕೊಳ್ಳಲು ಅವಶ್ಯವಿರುವ ವಿಚಾರಣೆ ಮಾಡಿದ ತರುವಾಯ, ಪಟ್ಟಿಯಲ್ಲಿ ಅವರ ಹೆಸರುಗಳು ಇರುವಂಥ ಕ್ರಮದಲ್ಲಿ, ನಿರ್ದಿಷ್ಟ ಪ್ರವರ್ಗದ ಹುದ್ದೆಗಳಲ್ಲಿ ಖಾಲಿ ಸ್ಥಾನಗಳಿಗೆ ನೇಮಕ ಮಾಡಲು ನೇಮಕಾತಿ ಪ್ರಾಧಿಕಾರಕ್ಕೆ ಕಳುಹಿಸತಕ್ಕದ್ದು. | (ii) ಬಿಲ್ಲು ಗಾಲುಗಳು<br>(iii) ಚಪ್ಪಟೆ ಪಾದ<br>(iv) ಗಂಟು ನರಗಳು<br>(v) ಮಾತಿನಲ್ಲಿ ಉಗ್ಗು<br>(ಡಿ) ಎದೆಯ ಎಕ್ಸರೆಯನ್ನು ಪರೀಕ್ಷೆ ಮಾಡಲು ತೆಗೆದುಕೊಳ್ಳತಕ್ಕದ್ದು.<br>ಮೇಲಿನ ಎಲ್ಲಾ ಪರೀಕ್ಷೆಗಳನ್ನು ವೈದ್ಯಕೀಯ ಮಂಡಳಿಯು ನಡೆಸ ತಕ್ಕದ್ದು. ವೈದ್ಯಕೀಯ ಪರೀಕ್ಷೆಯಲ್ಲಿ ದೈಹಿಕವಾಗಿ ಸೂಕ್ತರಾಗಿದ್ದಾರೆಂದು ಪ್ರಮಾಣೀಕರಿಸಲ್ಪಡುವಂಥ ಅಭ್ಯರ್ಥಿಗಳನ್ನು ಮಾತ್ರ ನೇಮಕಾತಿಗಾಗಿ ಪರಿಗಣಿಸತಕ್ಕದ್ದು.<br>**VI. ತರಬೇತಿ:–**<br>ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್‌ರವರು ನಿಗದಿಪಡಿಸುವ ತರಬೇತಿಗೆ ಅಭ್ಯರ್ಥಿಯು ಒಳಪಡತಕ್ಕದ್ದು ಮತ್ತು ತರಬೇತಿಯನ್ನು ಯಶಸ್ವಿಯಾಗಿ ಪೂರ್ಣಗೊಳಿಸತಕ್ಕದ್ದು. ಯಾವುದೇ ಪರೀಕ್ಷೆಯಲ್ಲಿ ವಿಫಲಗೊಂಡರೆ, ಅಭ್ಯರ್ಥಿಗೆ ಅದರಲ್ಲಿ ಉತ್ತೀರ್ಣರಾಗಲು ಒಂದು ಹೆಚ್ಚಿನ ಅವಕಾಶವನ್ನು ಕೊಡತಕ್ಕದ್ದು. ಎರಡನೇ ಅವಕಾಶದಲ್ಲೂ ಈ ಯಾವುದೇ ಪರೀಕ್ಷೆಗಳಲ್ಲಿ ಅನುತ್ತೀರ್ಣ ರಾದಂತಹವರನ್ನು ಸೇವೆಯಿಂದ ಬಿಡುಗಡೆಗೊಳಿಸತಕ್ಕದ್ದು.<br>**VII. ಪ್ರೊಬೇಷನ್:–**<br>ಕರ್ನಾಟಕ ಸಿವಿಲ್ ಸೇವಾ (ಪ್ರೊಬೇಷನ್) ನಿಯಮಗಳು, 1977ರಲ್ಲಿ ಏನೇ ಇದ್ದರೂ, ನೇರನೇಮಕಾತಿಯ ಅಭ್ಯರ್ಥಿಗಳು, ತರಬೇತಿಯ ಅವಧಿಯೂ ಸೇರಿದಂತೆ, ಅವರು ಸೇವೆಗೆ ಸೇರಿದ ದಿನಾಂಕದಿಂದ ಎರಡು ವರ್ಷ ಆರು ತಿಂಗಳು ಪ್ರೊಬೇಷನ್‌ನಲ್ಲಿ ಇರತಕ್ಕದ್ದು. |

| (1) | (2) | (3) | (4) | (5) | (6) | (7) |
| --- | --- | --- | --- | --- | --- | --- |
| **16.** | **ಸ್ಪೆಷಲ್ ರಿಸರ್ವ್ ಪೊಲೀಸ್ ಕಾನ್ಸ್‌ಟೇಬಲ್ (ಮಹಿಳೆ)**<br>**(ರೂ.5800–10500)** | **198** | **–** | **198** | **ನೇರ ನೇಮಕಾತಿಯಿಂದ:–**<br>ನೇರ ನೇಮಕಾತಿಯ ಆಯ್ಕೆಯನ್ನು ಆಯ್ಕೆ ಪ್ರಾಧಿಕಾರವು ಮಾಡತಕ್ಕದ್ದು.<br>**ಆಯ್ಕೆ ಪ್ರಾಧಿಕಾರವು ಈ ಕೆಳಕಂಡವರನ್ನು ಒಳಗೊಂಡಿರತಕ್ಕದ್ದು:–**<br>(1) ಡೆಪ್ಯೂಟಿ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕೆ.ಎಸ್.ಆರ್.ಪಿ. ಅಥವಾ ಡಿಜಿ ಮತ್ತು ಐಜಿಪಿಯವರಿಂದ ನಾಮ ನಿರ್ದೇಶನಗೊಂಡ ಡೆಪ್ಯೂಟಿ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್‌ರವರ ದರ್ಜೆಗಿಂತ ಕಡಿಮೆ ಇಲ್ಲದ ದರ್ಜೆಯ ಒಬ್ಬ ಅಧಿಕಾರಿ<br>– ಅಧ್ಯಕ್ಷರು<br>(2) ಅಡಿಷನಲ್ ಡೈರೆಕ್ಟರ್ ಜನರಲ್ ಆಫ್ ಪೊಲೀಸ್, ಕೆ.ಎಸ್.ಆರ್.ಪಿ. ಇವರಿಂದ ನಾಮನಿರ್ದೇಶಿತರಾದ ಒಬ್ಬ ಬೆಟಾಲಿಯನ್ ಕಮಾಂಡೆಂಟ್<br>– ಸದಸ್ಯರು<br>(3) ಸಮಾಜ ಕಲ್ಯಾಣ ಇಲಾಖೆಯ ನಿರ್ದೇಶಕರು ನಾಮನಿರ್ದೇಶಿಸಿದ ಉಪ ನಿರ್ದೇಶಕರ ದರ್ಜೆಗಿಂತ ಕಡಿಮೆ ಇಲ್ಲದ ದರ್ಜೆಯ ಒಬ್ಬ ಅಧಿಕಾರಿ<br>– ಸದಸ್ಯರು<br>(4) ಹಿಂದುಳಿದ ವರ್ಗಗಳ ನಿರ್ದೇಶಕರು ನಾಮನಿರ್ದೇಶಿಸಿದ ಉಪ ನಿರ್ದೇಶಕರ ದರ್ಜೆಗಿಂತ ಕಡಿಮೆ ಇಲ್ಲದ ದರ್ಜೆಯ ಒಬ್ಬ ಅಧಿಕಾರಿ – ಸದಸ್ಯರು<br>(5) ಅಲ್ಪ ಸಂಖ್ಯಾತರ ಕಲ್ಯಾಣ ಇಲಾಖೆಯ ನಿರ್ದೇಶಕರು ನಾಮನಿರ್ದೇಶಿಸಿದ ಉಪ ನಿರ್ದೇಶಕರ ದರ್ಜೆಗಿಂತ ಕಡಿಮೆ ಇಲ್ಲದ ದರ್ಜೆಯ ಒಬ್ಬ ಅಧಿಕಾರಿ.<br>– ಸದಸ್ಯರು<br>(6) ಸಹಾಯಕ ಆಡಳಿತಾಧಿಕಾರಿ, ಕೆ.ಎಸ್.ಆರ್.ಪಿ.<br>– ಸದಸ್ಯ ಕಾರ್ಯದರ್ಶಿ | **ನೇರ ನೇಮಕಾತಿಗಾಗಿ:**<br>**I. ಶೈಕ್ಷಣಿಕ ಅರ್ಹತೆ:–**<br>ಎಸ್.ಎಸ್.ಎಲ್.ಸಿ.ಯಲ್ಲಿ ಉತ್ತೀರ್ಣರಾಗಿರಬೇಕು ಅಥವಾ ತತ್ಸಮಾನ ವಿದ್ಯಾರ್ಹತೆಯನ್ನು ಹೊಂದಿರಬೇಕು.<br>**II. ವಯೋಮಿತಿ:–**<br>ಕರ್ನಾಟಕ ಸಿವಿಲ್ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು, 1977ರ 6ನೇ ನಿಯಮದಲ್ಲಿ ಏನೇ ಇದ್ದಾಗ್ಯೂ, ಹದಿನೆಂಟು (18) ವರ್ಷ ವಯಸ್ಸು ಪೂರ್ಣಗೊಂಡಿರಬೇಕು. ಆದರೆ–<br>**(i)** ಪರಿಶಿಷ್ಟ ಜಾತಿಗಳು, ಪರಿಶಿಷ್ಟ ಪಂಗಡಗಳು ಅಥವಾ ಇತರೆ ಹಿಂದುಳಿದ ವರ್ಗಗಳ ಪ್ರಕರಣಗಳಲ್ಲಿ ಇಪ್ಪತ್ತೇಳು ವರ್ಷಗಳು ಪೂರ್ಣಗೊಂಡಿರಬಾರದು.<br>**(ii)** ಇತರರ ಪ್ರಕರಣಗಳಲ್ಲಿ ಇಪ್ಪತ್ತೈದು ವರ್ಷಗಳು ಪೂರ್ಣಗೊಂಡಿರಬಾರದು:<br>**III. ದೈಹಿಕ ಸಹನೆ ಪರೀಕ್ಷೆ:–**<br>(i) ಅಭ್ಯರ್ಥಿಗಳು ನಾಲ್ಕು ನೂರು ಮೀಟರ್‌ಗಳನ್ನು ಎರಡು ನಿಮಿಷಗಳಲ್ಲಿ ಓಡಬೇಕು.<br>(ii) **ಉದ್ದ ಜಿಗಿತ ಅಥವಾ ಎತ್ತರ ಜಿಗಿತ**<br>**ಉದ್ದ ಜಿಗಿತ–** 2.50 ಮೀಟರುಗಳಿಗಿಂತ ಕಡಿಮೆ ಇಲ್ಲದಷ್ಟು.<br>**ಎತ್ತರ ಜಿಗಿತ–** 0.90 ಮೀಟರುಗಳಿಗಿಂತ ಕಡಿಮೆ ಇಲ್ಲದಷ್ಟು.<br>ಅಭ್ಯರ್ಥಿಗಳು ಯಾವುದೇ ಒಂದು ಜಿಗಿತವನ್ನು ಅಥವಾ ಎರಡೂ ಜಿಗಿತಗಳನ್ನು ಮಾಡಲು ಆಯ್ಕೆ ಮಾಡಿಕೊಳ್ಳಬಹುದು. ಆದರೆ, ಅವರು ಅವುಗಳ ಪೈಕಿ ಕೊನೇ ಪಕ್ಷ ಯಾವುದಾದರೂ ಒಂದರಲ್ಲಿ ಅರ್ಹತೆ ಗಳಿಸಬೇಕು (ಗರಿಷ್ಠ 3 ಅವಕಾಶಗಳಲ್ಲಿ)<br>(iii) **ಗುಂಡು ಎಸೆತ:** (4.00 ಕಿ.ಗ್ರಾಂ) 3.75 ಮೀಟರುಗಳಿಗೆ ಕಡಿಮೆ ಇಲ್ಲದಷ್ಟು. |

<table>
<tr><th>(1)</th><th>(2)</th><th>(3)</th><th>(4)</th><th>(5)</th><th>(6)</th><th>(7)</th></tr>
<tr><td></td><td></td><td></td><td></td><td></td><td>
ಪರಂತು, ಇಂಡಿಯಾ ರಿಸರ್ವ್ ಬೆಟಾಲಿಯನ್‌ಗೆ ನೇಮಕಾತಿ ಮಾಡುವುದಕ್ಕೆ ಸಂಬಂಧಿಸಿದಂತೆ, ಆಯ್ಕೆ ಸಮಿತಿಯ ಮೇಲ್ಕಂಡ ಸದಸ್ಯರ ಜೊತೆಗೆ ಕೇಂದ್ರ ಪೊಲೀಸ್ ದಳದ ಕಮಾಂಡೆಂಟರ ದರ್ಜೆಗಿಂತ ಕಡಿಮೆಯಲ್ಲದ ದರ್ಜೆಯ ಒಬ್ಬ ಅಧಿಕಾರಿ ಇರತಕ್ಕದ್ದು.
ನೇಮಕಾತಿಗಳನ್ನು ಮಾಡುವುದು, ಅರ್ಜಿಗಳ ಪರಿಶೀಲನೆ ಮತ್ತು ಸಾಮಾನ್ಯ ಲಿಖಿತ ಪರೀಕ್ಷೆಯ ಮೌಲ್ಯ ಮಾಪನ ಇವುಗಳನ್ನು ಪೊಲೀಸ್ ಕಾನ್ಸ್‌ಟೇಬಲ್‌ಗಳ ನೇಮಕಾತಿ ಸಮನ್ವಯಾಧಿಕಾರಿಯಾಗಿ ಡಿಐಜಿಪಿ, ನೇಮಕಾತಿ, ಇವರು ಮಾಡತಕ್ಕದ್ದು.
ಭರ್ತಿ ಮಾಡಬೇಕಾದ ಖಾಲಿ ಹುದ್ದೆಗಳ ಸಂಖ್ಯೆಗೆ ಸಂಬಂಧಿಸಿದಂತೆ ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ ಅವರಿಂದ ಪೂರ್ವಾನುಮೋದನೆ ಪಡೆದ ತರುವಾಯ, ಸಂಬಂಧಪಟ್ಟ ಜಿಲ್ಲೆಯ ಆಯ್ಕೆ ಪ್ರಾಧಿಕಾರವು ಅಧಿಕೃತ ರಾಜ್ಯಪತ್ರದಲ್ಲಿ ಅಧಿಸೂಚನೆ ಹೊರಡಿಸಿ ವ್ಯಾಪಕ ಪ್ರಚಾರ ನೀಡುವ ಮೂಲಕ ಆಯ್ಕೆ ಪ್ರಾಧಿಕಾರವು ನಿರ್ದಿಷ್ಟ ಪಡಿಸಬಹುದಾದಂಥ ನಮೂನೆಯಲ್ಲಿ ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಅಹ್ವಾನಿಸತಕ್ಕದ್ದು ಮತ್ತು ವ್ಯಾಪಕ ಪ್ರಸಾರವುಳ್ಳ ನಾಲ್ಕಕ್ಕಿಂತ ಕಡಿಮೆ ಇಲ್ಲದ ಪ್ರಮುಖ ದಿನಪತ್ರಿಕೆಗಳಲ್ಲಿ, (ಅವುಗಳ ಪೈಕಿ ಕನಿಷ್ಠ ಪಕ್ಷ ಒಂದು ಕನ್ನಡ ದಿನಪತ್ರಿಕೆಯಾಗಿರಬೇಕು) ಜಾಹೀರಾತನ್ನು ಸಹ ನೀಡತಕ್ಕದ್ದು. ಈ ಬಗ್ಗೆ ಆಕಾಶವಾಣಿ ಮತ್ತು ದೂರದರ್ಶನದಲ್ಲಿ ಸಹ ಪ್ರಚಾರ ನೀಡತಕ್ಕದ್ದು.
ಸದರಿ ಅಧಿಸೂಚನೆಗೆ ಅನುಸಾರವಾಗಿ ಸಲ್ಲಿಸಲಾಗುವ ಅರ್ಜಿಗಳನ್ನು ಸ್ವೀಕರಿಸಿದ ತರುವಾಯ, ಆಯ್ಕೆ ಪ್ರಾಧಿಕಾರವು ಅರ್ಹ ಅಭ್ಯರ್ಥಿಗಳ ಒಂದು ಪಟ್ಟಿಯನ್ನು ಸಿದ್ಧಪಡಿಸತಕ್ಕದ್ದು ಮತ್ತು ಕಾಲಾನುಕ್ರಮಣಿಕೆ ಪ್ರಕಾರ ನಡೆಸಲಾಗುವ ಈ ಮುಂದಿನ ಪರೀಕ್ಷೆಗಳಲ್ಲಿ ಅಭ್ಯರ್ಥಿಗಳ ಸಾಧನೆಯ ಆಧಾರದ ಮೇಲೆ ಆಯ್ಕೆಯನ್ನು ಮಾಡತಕ್ಕದ್ದು:–
ದೈಹಿಕ ಸಹನೆ ಪರೀಕ್ಷೆ:–
ಅಭ್ಯರ್ಥಿಗಳು ಮೊದಲು ದೈಹಿಕ ಸಹನೆ ಪರೀಕ್ಷೆಗೆ ಹಾಜರಾಗತಕ್ಕದ್ದು. ದೈಹಿಕ ಸಹನೆ ಪರೀಕ್ಷೆಯು ಕೇವಲ ಅರ್ಹತಾ ಪರೀಕ್ಷೆಯಾಗಿರುತ್ತದೆ. ದೈಹಿಕ ಸಹನೆ ಪರೀಕ್ಷೆಯಲ್ಲಿ
</td><td>
ಮಾಜಿ ಸೈನಿಕ ಅಭ್ಯರ್ಥಿಗಳೂ ಸೇರಿ ದೈಹಿಕ ಗುಣಮಟ್ಟ ಪರೀಕ್ಷೆಗೆ ಅರ್ಹತೆ ಗಳಿಸಲು ಅಭ್ಯರ್ಥಿಗಳು ಕಲಾನುಕ್ರಮಣಿಕೆಯಲ್ಲಿ ನಡೆಯುವ ಮೇಲ್ಕಂಡ ಎಲ್ಲ 3 ಪರೀಕ್ಷೆಗಳಲ್ಲೂ ಅರ್ಹರಾಗಬೇಕು.
IV. ದೈಹಿಕ ಗುಣಮಟ್ಟ ಪರೀಕ್ಷೆ:–
(ಎ)ಎತ್ತರ: 158 ಸೆಂ.ಮೀ.ಗಿಂತ ಕಡಿಮೆ ಇರಬಾರದು.
(ಬಿ) ತೂಕ: 45 ಕಿ.ಗ್ರಾಂ. ಗಿಂತ ಕಡಿಮೆ ಇರಬಾರದು.
V. ವೈದ್ಯಕೀಯ ಪರೀಕ್ಷೆ:–
ತಾತ್ಕಾಲಿಕ ಆಯ್ಕೆ ಪಟ್ಟಿಯನ್ನು ಪ್ರಕಟಿಸಿದ ನಂತರ, ತಾತ್ಕಾಲಿಕ ಆಯ್ಕೆ ಪಟ್ಟಿಯಲ್ಲಿ ಇರುವ ಅಭ್ಯರ್ಥಿಗಳು, ಆಯ್ಕೆ ಪ್ರಾಧಿಕಾರವು ನಿಗದಿಪಡಿಸಿದ ಸಮಯ ಮತ್ತು ಸ್ಥಳದಲ್ಲಿ ಸಮಗ್ರ ವೈದ್ಯಕೀಯ ಪರೀಕ್ಷೆಗಾಗಿ ವೈದ್ಯಕೀಯ ಮಂಡಳಿಯ ಮುಂದೆ ಹಾಜರಾಗತಕ್ಕದ್ದು.
ವೈದ್ಯಕೀಯ ಪರೀಕ್ಷೆಯು ಈ ಕೆಳಗಿನವುಗಳನ್ನು ಒಳಗೊಂಡಿರತಕ್ಕದ್ದು:
(ಎ) ದೃಷ್ಟಿ:–
ಕನ್ನಡಕ ಸಹಿತ ಅಥವಾ ಕನ್ನಡಕ ಇಲ್ಲದೆ ದೂರ ಮತ್ತು ಸಮೀಪ ದೃಷ್ಟಿಯನ್ನು ಈ ಕೆಳಗಿನ ಪ್ರಮಾಣದಲ್ಲಿ ಹೊಂದಿರಬೇಕು.
(i) ದೂರದೃಷ್ಟಿ:–
<table>
<tr><td>ಉತ್ತಮ ಕಣ್ಣು</td><td>ದೋಷಯುಕ್ತ ಕಣ್ಣು</td></tr>
<tr><td>6 / 9</td><td>6 / 9</td></tr>
<tr><td>6 / 9</td><td>6 / 12</td></tr>
</table>
(ii) ಸಮೀಪ ದೃಷ್ಟಿ:–
<table>
<tr><td>ಉತ್ತಮ ಕಣ್ಣು</td><td>ದೋಷಯುಕ್ತ ಕಣ್ಣು</td></tr>
<tr><td>0/6</td><td>0 / 8</td></tr>
</table>
</td></tr>
</table>

| (1) | (2) | (3) | (4) | (5) | (6) | (7) |
|---|---|---|---|---|---|---|
| | | | | | ಅರ್ಹರಾದವರು ಮಾತ್ರ ದೈಹಿಕ ಗುಣಮಟ್ಟಗಳ ಪರೀಕ್ಷೆಗೆ ಹಾಜರಾಗತಕ್ಕದ್ದು.<br>**ದೈಹಿಕ ಗುಣಮಟ್ಟಗಳ ಪರೀಕ್ಷೆ:–**<br>ದೈಹಿಕ ಸಹನೆ ಪರೀಕ್ಷೆಯಲ್ಲಿ ಅರ್ಹರಾದವರು ಮಾತ್ರ ದೈಹಿಕ ಗುಣಮಟ್ಟದ ಪರೀಕ್ಷೆಗೆ ಹಾಜರಾಗ<br>ತಕ್ಕದ್ದು. ನಿಗದಿಪಡಿಸಲಾದ ದೈಹಿಕ ಗುಣಮಟ್ಟಗಳನ್ನು ಹೊಂದಿಲ್ಲದವರನ್ನು ಅನರ್ಹಗೊಳಿಸತಕ್ಕದ್ದು.<br>ಪ್ರತಿಯೊಂದು ಜಿಲ್ಲೆಗೆ ಸಂಬಂಧಿಸಿದಂತೆ ದೈಹಿಕ ಸಹನೆ ಪರೀಕ್ಷೆಯನ್ನು ಮತ್ತು ದೈಹಿಕ ಗುಣಮಟ್ಟ ಪರೀಕ್ಷೆಯನ್ನು ಪೊಲೀಸ್ ಡೆಪ್ಯೂಟಿ ಇನ್ಸ್‌ಪೆಕ್ಟರ್ ಜನರಲ್, ಕೆಎಸ್‌ಆರ್‌ಪಿ (ಅಧ್ಯಕ್ಷರು) ಮತ್ತು ಇತರ ಇಬ್ಬರು ಸದಸ್ಯರಿರುವ (ಡಿ.ಜಿ ಮತ್ತು ಐಜಿಪಿ ಅವರು ನಾಮ ನಿರ್ದೇಶಿಸಿದ ಕಮಾಂಡೆಂಟರು) ಸಮಿತಿಯು ನಡೆಸತಕ್ಕದ್ದು.<br>**ಟಿಪ್ಪಣಿ–(1):–** ಈ ಮುಂದಿನ ಎರಡು ಪರೀಕ್ಷೆಗಳ ಪೈಕಿ ಯಾವುದೇ ಪರೀಕ್ಷೆಗೆ, ಎಂದರೆ– ದೈಹಿಕ ಸಹನೆ, ದೈಹಿಕ ಗುಣಮಟ್ಟಗಳ ಪರೀಕ್ಷೆಗಳಿಗೆ ಗೈರು ಹಾಜರಾಗುವ ಅಭ್ಯರ್ಥಿಗಳನ್ನು ಅನರ್ಹಗೊಳಿಸತಕ್ಕದ್ದು.<br>**ಟಿಪ್ಪಣಿ–(2):–** ದೈಹಿಕ ಸಹನೆ ಮತ್ತು ದೈಹಿಕ ಗುಣಮಟ್ಟಗಳ ಪರೀಕ್ಷೆಗಳಲ್ಲಿ ಅರ್ಹರಾಗುವ ಅಭ್ಯರ್ಥಿಗಳನ್ನು ಲಿಖಿತ ಪರೀಕ್ಷೆಗೆ ಕರೆಯತಕ್ಕದ್ದು.<br>**ಲಿಖಿತ ಪರೀಕ್ಷೆ:–**<br>ಎಲ್ಲ ಪರೀಕ್ಷೆಗಳಲ್ಲಿ ಎಂದರೆ, ದೈಹಿಕ ಸಹನೆ ಪರೀಕ್ಷೆ ಮತ್ತು ದೈಹಿಕ ಗುಣಮಟ್ಟಗಳ ಪರೀಕ್ಷೆಗಳಲ್ಲಿ ಅರ್ಹರಾದಂತಹವರು ಕನ್ನಡ ಅಥವಾ ಇಂಗ್ಲೀಷಿನ ಲಿಖಿತ ಪರೀಕ್ಷೆಗೆ ಹಾಜರಾಗತಕ್ಕದ್ದು. ಪರೀಕ್ಷೆಯು ನೂರು ಅಂಕಗಳನ್ನು ಹೊಂದಿರತಕ್ಕದ್ದು. ಬಹು ಆಯ್ಕೆಯ ಉತ್ತರಗಳಿರುವ ಆಬ್ಜೆಕ್ಟಿವ್ ಮಾದರಿಯ ಪ್ರಶ್ನೆಗಳು –<br>(1) ಸಾಮಾನ್ಯ ಅಧ್ಯಯನಗಳು; ಮತ್ತು (2) ಬೌದ್ಧಿಕ ಸಾಮರ್ಥ್ಯಕ್ಕೆ ಸಂಬಂಧಿಸಿರುತ್ತದೆ.<br>ಸಾಮಾನ್ಯ ಅಧ್ಯಯನವು ಸಾಮಾನ್ಯ ಜ್ಞಾನ, ವಿಜ್ಞಾನ, ನೈತಿಕ ಶಿಕ್ಷಣ ಭೂಗೋಳ, ಆಧುನಿಕ ಭಾರತದ ಇತಿಹಾಸ; ರಾಷ್ಟ್ರೀಯ ಸ್ವಾತಂತ್ರ್ಯ ಚಳುವಳಿ, ಭಾರತದ ಸಂವಿಧಾನ; ಮೂಲಭೂತ ಹಕ್ಕುಗಳು ಮತ್ತು ನಿರ್ದೇಶಕ ತತ್ವಗಳು | (iii) ಪ್ರತಿಯೊಂದು ಕಣ್ಣು ಸಂಪೂರ್ಣ ಕ್ಷೇತ್ರ ದೃಷ್ಟಿ ಹೊಂದಿರಬೇಕು.<br>ಬಣ್ಣ ಕುರುಡು, ಮೆಳ್ಳಗಣ್ಣು ಅಥವಾ ಯಾವುದೇ ರೋಗಗ್ರಸ್ತಸ್ಥಿತಿಯ ಕಣ್ಣುಗಳನ್ನು ಅಥವಾ ಯಾವುದೇ ಕಣ್ಣಿನ ರೆಪ್ಪೆಗಳನ್ನು ಅನರ್ಹತೆ ಎಂದು ಭಾವಿಸತಕ್ಕದ್ದು.<br>**(ಬಿ) ಶ್ರವಣ ಪರೀಕ್ಷೆಗಳು :–**<br>(i) ರಿನ್ನೆಸ್ ಟೆಸ್ಟ್<br>(ii) ವೆಬ್ಬರ್ಸ್ ಟೆಸ್ಟ್<br>(iii) ಟೆಸ್ಟ್ ಫಾರ್ ವೆರ್ಟಿಗೊ<br>ಮೇಲೆ ಹೇಳಲಾದ ಪರೀಕ್ಷೆಗಳ ಅವಧಿಯಲ್ಲಿ ಯಾವುದೇ ನ್ಯೂನತೆಗಳು ಕಂಡುಬಂದಲ್ಲಿ, ಅದನ್ನು ಅನರ್ಹತೆ ಎಂದು ಭಾವಿಸತಕ್ಕದ್ದು.<br>(ಸಿ) ಈ ಕೆಳಗಿನವುಗಳಲ್ಲಿ ಯಾವುದೇ ಒಂದು ನ್ಯೂನತೆಯು ದೈಹಿಕ ಅನರ್ಹತೆ ಯಾಗತಕ್ಕದ್ದು:<br>(i) ತಾಕು ಮಂಡಿಗಳು<br>(ii) ಬಿಲ್ಲು ಗಾಲುಗಳು<br>(iii) ಚಪ್ಪಟೆ ಪಾದ<br>(iv) ಗಂಟು ನರಗಳು<br>(v) ಮಾತಿನಲ್ಲಿ ಉಗ್ಗು<br>(ಡಿ) ಎದೆಯ ಎಕ್ಸರೆಯನ್ನು ಪರೀಕ್ಷೆ ಮಾಡಲು ತೆಗೆದುಕೊಳ್ಳತಕ್ಕದ್ದು.<br>ಮೇಲಿನ ಎಲ್ಲಾ ಪರೀಕ್ಷೆಗಳನ್ನು ವೈದ್ಯಕೀಯ ಮಂಡಳಿಯು ನಡೆಸ ತಕ್ಕದ್ದು. ವೈದ್ಯಕೀಯ ಪರೀಕ್ಷೆಯಲ್ಲಿ ದೈಹಿಕವಾಗಿ ಸೂಕ್ತರಾಗಿದ್ದಾರೆಂದು ಪ್ರಮಾಣೀಕರಿಸಲ್ಪಡುವಂಥ ಅಭ್ಯರ್ಥಿಗಳನ್ನು ಮಾತ್ರ ನೇಮಕಾತಿಗಾಗಿ |

| (1) | (2) | (3) | (4) | (5) | (6) | (7) |
|---|---|---|---|---|---|---|
| | | | | | ಇವುಗಳನ್ನು ಒಳಗೊಂಡಿರುತ್ತದೆ. ಸಾಮಾನ್ಯ ಭೌದ್ಧಿಕ ಸಾಮರ್ಥ್ಯವು ಗಣನಾ ಕೌಶಲ್ಯಗಳು ಮತ್ತು ಸ್ಥಳಗಳನ್ನು ಗುರುತಿಸುವ ಕೌಶಲ್ಯಗಳನ್ನು ಒಳಗೊಂಡಿರುತ್ತದೆ. ಪರೀಕ್ಷೆಯು ಎರಡು ಗಂಟೆಯ ಅವಧಿಯದ್ದಾಗಿರತಕ್ಕದ್ದು.<br><br>ಆಯ್ಕೆ ಪ್ರಾಧಿಕಾರವು ನಡೆಸಿದ ಅರ್ಹತಾ ಪರೀಕ್ಷೆಯಲ್ಲಿ ಮತ್ತು ಲಿಖಿತ ಪರೀಕ್ಷೆಯಲ್ಲಿ ಅಭ್ಯರ್ಥಿಗಳು ಪಡೆದ ಶೇಕಡಾವಾರು ಅಂಕಗಳನ್ನು ಸೇರಿಸಿ, ಆಯ್ಕೆ ಪ್ರಾಧಿಕಾರವು ಒಂದು ಅರ್ಹತಾ ಪಟ್ಟಿಯನ್ನು ಸಿದ್ಧಪಡಿಸತಕ್ಕದ್ದು.<br><br>ಯಾವುದೇ ಕಾನೂನು, ನಿಯಮ ಅಥವಾ ಆದೇಶದ ಮೇರೆಗೆ ಉಪಬಂಧಿಸಲಾದ ಮೀಸಲಾತಿಯನ್ನು ಗಣನೆಗೆ ತೆಗೆದುಕೊಂಡ ತರುವಾಯ, ಪ್ರತಿಯೊಂದು ಪ್ರವರ್ಗದಲ್ಲಿ ಮತ್ತು ಸಮೂಹದಲ್ಲಿ ಅಧಿಸೂಚಿಸಲಾದ ಖಾಲಿ ಹುದ್ದೆಗಳ ಸಂಖ್ಯೆಗೆ ಸಮನಾಗಿರುವಂತೆ, ಅಭ್ಯರ್ಥಿಗಳ ಅರ್ಹತಾ ಕ್ರಮದಲ್ಲಿ ಒಂದು ತಾತ್ಕಾಲಿಕ ಆಯ್ಕೆಪಟ್ಟಿಯನ್ನು ತಯಾರಿಸತಕ್ಕದ್ದು ಮತ್ತು ಪ್ರಕಟಿಸತಕ್ಕದ್ದು.<br><br>ತಾತ್ಕಾಲಿಕ ಆಯ್ಕೆ ಪಟ್ಟಿಯಲ್ಲಿ ಸೇರಿಸಿರುವ ಅಭ್ಯರ್ಥಿಗಳು ಆಯ್ಕೆ ಪ್ರಾಧಿಕಾರವು ಗೊತ್ತುಪಡಿಸಿದ ಸಮಯ ಮತ್ತು ಸ್ಥಳದಲ್ಲಿ ವೈದ್ಯಕೀಯ ಪರೀಕ್ಷೆಗಾಗಿ ವೈದ್ಯಕೀಯ ಮಂಡಳಿಯ ಮುಂದೆ ಹಾಜರಾಗತಕ್ಕದ್ದು.<br><br>**ನೇಮಕಾತಿ:–**<br><br>ವೈದ್ಯಕೀಯ ಮಂಡಳಿಯಿಂದ ವೈದ್ಯಕೀಯ ಪರೀಕ್ಷೆ ಆದ ನಂತರ, ಆಯ್ಕೆ ಪ್ರಾಧಿಕಾರವು ಅಂತಿಮ ಆಯ್ಕೆ ಪಟ್ಟಿಯನ್ನು ಸಿದ್ಧಪಡಿಸತಕ್ಕದ್ದು ಮತ್ತು ಅದನ್ನು ಪ್ರಕಟಿಸತಕ್ಕದ್ದು.<br><br>ಬೆಟಾಲಿಯನ್‌ಗಳಿಗೆ ಅಭ್ಯರ್ಥಿಗಳ ಹಂಚಿಕೆಯನ್ನು ವಿವಿಧ ಪ್ರವರ್ಗಗಳ ಅಡಿಯಲ್ಲಿ ಲಭ್ಯವಿರುವ ಖಾಲಿ ಸ್ಥಾನಗಳು, ಅಭ್ಯರ್ಥಿಯ ಅರ್ಹತೆ ಮತ್ತು ಆದ್ಯತೆಯನ್ನು ಆಧರಿಸಿ ಮಾಡತಕ್ಕದ್ದು.<br><br>ಹಾಗೆ ಸಿದ್ಧಪಡಿಸಿದ ಮತ್ತು ಪ್ರಕಟಿಸಿದ ಅಭ್ಯರ್ಥಿಗಳ ಅಂತಿಮ ಆಯ್ಕೆ ಪಟ್ಟಿಯನ್ನು, ಅಂಥ ಅಭ್ಯರ್ಥಿಗಳು ನೇಮಕಾತಿಗೆ ಎಲ್ಲ ರೀತಿಯಲ್ಲೂ ಸೂಕ್ತ ರಾಗಿದ್ದಾರೆಂದು ಮನವರಿಕೆ ಮಾಡಿಕೊಳ್ಳಲು ಅವಶ್ಯವಿರುವ ವಿಚಾರಣೆ ಮಾಡಿದ ತರುವಾಯ, | ಪರಿಗಣಿಸತಕ್ಕದ್ದು.<br><br>**VI. ತರಬೇತಿ:–**<br><br>ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್‌ರವರು ನಿಗದಿಪಡಿಸುವ ತರಬೇತಿಗೆ ಅಭ್ಯರ್ಥಿಯು ಒಳಪಡತಕ್ಕದ್ದು ಮತ್ತು ತರಬೇತಿಯನ್ನು ಯಶಸ್ವಿಯಾಗಿ ಪೂರ್ಣಗೊಳಿಸತಕ್ಕದ್ದು. ತರಬೇತಿಯ ಅವಧಿಯಲ್ಲಿ ಯಾವುದೇ ಪರೀಕ್ಷೆಯಲ್ಲಿ ವಿಫಲಗೊಂಡರೆ, ಅಭ್ಯರ್ಥಿಗೆ ಅದರಲ್ಲಿ ಉತ್ತೀರ್ಣರಾಗಲು ಒಂದು ಹೆಚ್ಚಿನ ಅವಕಾಶವನ್ನು ಕೊಡತಕ್ಕದ್ದು. ಎರಡನೇ ಅವಕಾಶದಲ್ಲೂ ಈ ಯಾವುದೇ ಪರೀಕ್ಷೆಗಳಲ್ಲಿ ಅನುತ್ತೀರ್ಣ ರಾದಂತಹವರನ್ನು ಸೇವೆಯಿಂದ ಬಿಡುಗಡೆಗೊಳಿಸತಕ್ಕದ್ದು.<br><br>**VII. ಪ್ರೋಬೇಷನ್:–**<br><br>ಕರ್ನಾಟಕ ಸಿವಿಲ್ ಸೇವಾ (ಪ್ರೊಬೇಷನ್) ನಿಯಮಗಳು, 1977ರಲ್ಲಿ ಏನೇ ಇದ್ದರೂ, ನೇರನೇಮಕಾತಿಯ ಅಭ್ಯರ್ಥಿಗಳು, ತರಬೇತಿಯ ಅವಧಿಯೂ ಸೇರಿದಂತೆ, ಅವರು ಸೇವೆಗೆ ಸೇರಿದ ದಿನಾಂಕದಿಂದ ಎರಡು ವರ್ಷ ಆರು ತಿಂಗಳು ಪ್ರೊಬೇಷನ್‌ನಲ್ಲಿ ಇರತಕ್ಕದ್ದು. |

| (1) | (2) | (3) | (4) | (5) | (6) | (7) |
|---|---|---|---|---|---|---|
| | | | | | ಪಟ್ಟಿಯಲ್ಲಿ ಅವರ ಹೆಸರುಗಳು ಇರುವಂಥ ಕ್ರಮದಲ್ಲಿ, ನಿರ್ದಿಷ್ಟ ಪ್ರವರ್ಗದ ಹುದ್ದೆಗಳಲ್ಲಿ ಖಾಲಿ ಸ್ಥಾನಗಳಿಗೆ ನೇಮಕ ಮಾಡಲು ನೇಮಕಾತಿ ಪ್ರಾಧಿಕಾರಕ್ಕೆ ಕಳುಹಿಸತಕ್ಕದ್ದು. | |
| **17.** | **ಜಮೇದಾರ್ ಸೇವಕ**<br><br>**(ರೂ.5800–10500)** | **07** | **–** | **07** | ಸಂಯುಕ್ತ ಜೇಷ್ಠತೆಯ ಆಧಾರದ ಮೇಲೆ ಐಆರ್‌ಬಿ ದೋಬಿಗಳು, ಅಡಿಗೆಯವರು, ನೀರು ತರುವವರು, ಕ್ಷೌರಿಕರು, ಕಸಗುಡಿಸುವವರು (ಒಣ/ಹಸಿ), ಟೈಲರುಗಳು, ಬಡಗಿಗಳು, ಚಮ್ಮಾರರೂ ಸೇರಿದಂತೆ ಸೇವಕ(ಪುರುಷ) ವೃಂದದಿಂದ ಬಡ್ತಿ ಮೂಲಕ | ಅಂಕಣ (6)ರಲ್ಲಿ ನಿಗದಿಪಡಿಸಿರುವ ವೃಂದದಲ್ಲಿ ಐದು ವರ್ಷಗಳಿಗೆ ಕಡಿಮೆ ಇಲ್ಲದಂತೆ ಸೇವೆಯನ್ನು ಸಲ್ಲಿಸಿರಬೇಕು.<br><br>ಪರಂತು, ಐದು ವರ್ಷಗಳಿಗೆ ಕಡಿಮೆ ಇಲ್ಲದಂತೆ ಸೇವೆಯನ್ನು ಸಲ್ಲಿಸಿದ ಸೇವಕರು ಲಭ್ಯವಿಲ್ಲದಿದ್ದಲ್ಲಿ, ಮೂರು ವರ್ಷಗಳಿಗಿಂತ ಕಡಿಮೆ ಇಲ್ಲದಂತೆ ಸೇವೆ ಸಲ್ಲಿಸಿರುವ ಸೇವಕರನ್ನು ಮುಂಬಡ್ತಿಗಾಗಿ ಪರಿಗಣಿಸಬಹುದು. |
| **18.** | **ಸೇವಕ (ಪುರುಷ), ಕೆಎಸ್‌ಆರ್‌ಪಿ, ಐಆರ್‌ಬಿ ದೋಬಿಗಳು, ಅಡಿಗೆಯವರು, ನೀರು ತರುವವರು, ಕ್ಷೌರಿಕರು, ಕಸಗುಡಿಸುವವರು (ಒಣ/ಹಸಿ), ಟೈಲರುಗಳು, ಬಡಗಿಗಳು, ಚಮ್ಮಾರರೂ ಸೇರಿದಂತೆ**<br><br>**(ರೂ.5200–8200)** | **1085** | **–** | **1085** | **ನೇರ ನೇಮಕಾತಿಯಿಂದ:–**<br>ಸೇವಕರ ಎಲ್ಲಾ ವಿಭಾಗಗಳಿಗೆ ನೇರ ನೇಮಕಾತಿಯನ್ನು ಐ.ಜಿ.ಪಿ., ಕೆಎಸ್‌ಆರ್‌ಪಿ ರವರು ರಚಿಸಿದ ಈ ಕೆಳಗಿನವರುಗಳನ್ನು ಒಳಗೊಂಡ ಆಯ್ಕೆ ಪ್ರಾಧಿಕಾರವು ಮಾಡತಕ್ಕದ್ದು:–<br>(i) ಡೆಪ್ಯೂಟಿ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕೆ.ಎಸ್.ಆರ್.ಪಿ. – ಅಧ್ಯಕ್ಷರು<br>(ii) ಕೆಎಸ್‌ಆರ್‌ಪಿಯ ಇಬ್ಬರು ಕಮಾಂಡೆಂಟ್‌ಗಳು – ಸದಸ್ಯರು<br>ಆಯ್ಕೆ ಪ್ರಾಧಿಕಾರವು ಅಧಿಕೃತ ರಾಜ್ಯ ಪತ್ರದಲ್ಲಿ ಅಧಿಸೂಚನೆ ಹೊರಡಿಸುವ ಮೂಲಕ, ರಾಜ್ಯವ್ಯಾಪಿ ಪ್ರಸಾರವುಳ್ಳ ಒಂದು ಕನ್ನಡ ದಿನಪತ್ರಿಕೆಯಲ್ಲಿ ಮತ್ತು ಒಂದು ಇಂಗ್ಲೀಷ್ ದಿನಪತ್ರಿಕೆಯಲ್ಲಿ ಹೀಗೆ ಎರಡು ದಿನ ಪತ್ರಿಕೆಗಳಲ್ಲಿ ಪ್ರಕಟಣೆ ಹೊರಡಿಸುವ ಮೂಲಕ ಮತ್ತು ಅಂತರ್‌ಜಾಲ ಮತ್ತು ವಿದ್ಯುನ್ಮಾನ ಮಾಧ್ಯಮದ ಮೂಲಕ ಎಲ್ಲ ಅರ್ಹ **ಪುರುಷ ಅಭ್ಯರ್ಥಿಗಳಿಂದ,** ಈ ನಿಯಮಗಳ ಅಡಿಯಲ್ಲಿ ನೇಮಕಾತಿಯ ಉದ್ದೇಶಕ್ಕಾಗಿ ನಿಗದಿಪಡಿಸಬಹುದಾದ ನಮೂನೆಯಲ್ಲಿ ಅರ್ಜಿಗಳನ್ನು ಆಹ್ವಾನಿಸತಕ್ಕದ್ದು.<br>ಅಭ್ಯರ್ಥಿಗಳು ದೈಹಿಕ ಸಾಮರ್ಥ್ಯ ಪರೀಕ್ಷೆಗೆ ಹಾಜರಾಗತಕ್ಕದ್ದು. | **I ಶೈಕ್ಷಣಿಕ ಅರ್ಹತೆ:**<br>ಏಳನೇ ತರಗತಿ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕು.<br>**II. ವಯೋಮಿತಿ:–**<br>ಕರ್ನಾಟಕ ಸಿವಿಲ್ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು, 1977ರ 6ನೇ ನಿಯಮದಲ್ಲಿ ಏನೇ ಇದ್ದಾಗ್ಯೂ, ಹದಿನೆಂಟು (18)ವರ್ಷಗಳ ವಯಸ್ಸು ಪೂರ್ಣಗೊಂಡಿರಬೇಕು. ಆದರೆ,–<br>**(i)** ಪರಿಶಿಷ್ಟ ಜಾತಿಗಳು, ಪರಿಶಿಷ್ಟ ಪಂಗಡಗಳು ಅಥವಾ ಇತರೆ ಹಿಂದುಳಿದ ವರ್ಗಗಳ ಪ್ರಕರಣಗಳಲ್ಲಿ ಮೂವತ್ತೈದು(35) ವರ್ಷ ವಯಸ್ಸನ್ನು ಮೀರಿರಬಾರದು:<br>**(ii)** ಇತರರ ಪ್ರಕರಣಗಳಲ್ಲಿ ಮೂವತ್ತು (30) ವರ್ಷ ವಯಸ್ಸನ್ನು ಮೀರಿರಬಾರದು.<br>ಪರಂತು, ಸೇವೆಯಿಂದ ಬಿಡುಗಡೆ ಹೊಂದಿದ, ಸೇವಾ ಕಡಿತ ಅಥವಾ ಸೇವಾ ನಿವೃತ್ತಿಯ ಕಾರಣದಿಂದ ಬಿಡುಗಡೆಯಾದ ಮಾಜಿ ಸೈನಿಕ ಅಭ್ಯರ್ಥಿಗಳ ಪ್ರಕರಣದಲ್ಲಿ ವಯೋಮಿತಿಯು ಆತನು ಮಿಲಿಟರಿಯಲ್ಲಿ ಸಲ್ಲಿಸಿರುವ ಸೇವಾ ವರ್ಷಗಳ ಜೊತೆಗೆ ಮೂರು ವರ್ಷಗಳು ಹೆಚ್ಚು ಆಗಿರತಕ್ಕದ್ದು. ಆದಾಗ್ಯೂ ಯಾರೇ ಮಾಜಿ ಸೈನಿಕನು ಸರ್ಕಾರದ ಯಾವುದೇ ಸೇವೆಯಲ್ಲಿ ಈ ಮೊದಲೇ ಈ ಸವಲತ್ತನ್ನು ಪಡೆದುಕೊಂಡಿದ್ದಲ್ಲಿ ಈ ಸೌಲಭ್ಯವನ್ನು ಪಡೆಯಲು ಈ ನಿಯಮಗಳ ಅಡಿಯಲ್ಲಿ ಪುನ: ಅರ್ಹನಾಗಿರತಕ್ಕದ್ದಲ್ಲ. |

<table>
<tr><th>(1)</th><th>(2)</th><th>(3)</th><th>(4)</th><th>(5)</th><th>(6)</th><th>(7)</th></tr>
<tr><td></td><td></td><td></td><td></td><td></td>
<td>

**ಸೇವಕರುಗಳಿಗಾಗಿ:–**

**ಟಿಪ್ಪಣಿ (1):–** ಉದ್ದ ಜಿಗಿತ ಮತ್ತು ಗುಂಡು ಎಸೆತಗಳಲ್ಲಿ ಅರ್ಹತೆ ಪಡೆಯಲು ಅಭ್ಯರ್ಥಿಯು ಗರಿಷ್ಠ ಮೂರು ಪ್ರಯತ್ನಗಳನ್ನು ಉಪಯೋಗಿಸಿಕೊಳ್ಳಬಹುದು.

**ಟಿಪ್ಪಣಿ (2):–** ಅಭ್ಯರ್ಥಿಗಳು ಎಲ್ಲಾ ಮೂರು ಪರೀಕ್ಷೆಗಳಲ್ಲಿ ಅರ್ಹರಾಗತಕ್ಕದ್ದು.

**ದೈಹಿಕ ದಾರ್ಢ್ಯತೆ ಪರೀಕ್ಷೆ:–**

ನೀರು ತರುವವರು ಮತ್ತು ಕಸ ಗುಡಿಸುವವರ ಆಯ್ಕೆಯನ್ನು ಬಹಿರಂಗ ದಾರ್ಢ್ಯತೆ ಪರೀಕ್ಷೆ ಮೂಲಕ ಮಾಡತಕ್ಕದ್ದು. ಅಭ್ಯರ್ಥಿಗಳನ್ನು ಅವರ ವೈಯಕ್ತಿಕ ಕಾಲ ನಿಯಮದ ಆಧಾರದ ಮೇಲೆ ಆಯ್ಕೆ ಮಾಡಲಾಗುವುದು.

**ವೃತ್ತಿ ಪ್ರಾಯೋಗಿಕ ಪರೀಕ್ಷೆ:–**

ನೀರು ತರುವವರು ಮತ್ತು ಕಸಗುಡಿಸುವವರನ್ನು ಹೊರತುಪಡಿಸಿ, ಇತರ ಅಭ್ಯರ್ಥಿಗಳು, ಪ್ರತಿಯೊಂದು ವೃತ್ತಿಗಾಗಿ ಸಮಿತಿಯು ನಡೆಸುವ ಪ್ರಾಯೋಗಿಕ ಪರೀಕ್ಷೆಗೆ ಒಳಪಡತಕ್ಕದ್ದು. ಅರ್ಹರಾದಂತಹವರನ್ನು ಆಯಾ ವೃತ್ತಿಗೆ ಸಂಬಂಧಿಸಿದ ಪರೀಕ್ಷೆಯಲ್ಲಿ ಪಡೆದ ಅಂಕಗಳನ್ನು ಆಧರಿಸಿ, ಆಯ್ಕೆಗೆ ಪರಿಗಣಿಸಲಾಗುವುದು.

ಆಯ್ಕೆ ಪ್ರಾಧಿಕಾರವು ಅಂತಿಮ ಆಯ್ಕೆ ಪಟ್ಟಿಯನ್ನು ತಯಾರಿಸತಕ್ಕದ್ದು ಮತ್ತು ಪ್ರಕಟಿಸತಕ್ಕದ್ದು.

ಬ್ಯಾಟಲಿಯನ್ನುಗಳಿಗೆ ಆಭ್ಯರ್ಥಿಗಳ ಹಂಚಿಕೆಯನ್ನು ವಿವಿಧ ಪ್ರವರ್ಗಗಳ ಅಡಿಯಲ್ಲಿ ಇರುವ ಖಾಲಿಸ್ಥಾನಗಳು, ಅರ್ಹತೆ ಮತ್ತು ಅಭ್ಯರ್ಥಿಯ ಆದ್ಯತೆಯನ್ನು ಆಧರಿಸಿ ಮಾಡ ಲಾಗುವುದು.

ಹಾಗೆ ಸಿದ್ಧಪಡಿಸಲಾದ ಮತ್ತು ಪ್ರಕಟಿಸಲಾದ ಅಭ್ಯರ್ಥಿಗಳ ಅಂತಿಮ ಆಯ್ಕೆ ಪಟ್ಟಿಯನ್ನು, ಅಭ್ಯರ್ಥಿಗಳು ಅಂಥ ನೇಮಕಾತಿಗೆ ಎಲ್ಲ ರೀತಿಯಲ್ಲಿ ಸೂಕ್ತರಾಗಿದ್ದಾರೆಂದು ಮನದಟ್ಟು ಮಾಡಿಕೊಂಡ ಮೇಲೆ, ಪಟ್ಟಿಯಲ್ಲಿ ಅವರ ಹೆಸರುಗಳು ಕಂಡುಬರುವ ಕ್ರಮದಲ್ಲಿ, ಹುದ್ದೆಗಳ ನಿರ್ದಿಷ್ಟ ಪ್ರವರ್ಗದಲ್ಲಿನ ಖಾಲಿ ಹುದ್ದೆಗಳಿಗೆ ನೇಮಕಮಾಡಲು ನೇಮಕಾತಿ ಪ್ರಾಧಿಕಾರಕ್ಕೆ ಕಳುಹಿಸತಕ್ಕದ್ದು.

</td>
<td>

**III.ದೈಹಿಕ ಸಾಮರ್ಥ್ಯ ಪರೀಕ್ಷೆಗಳು:–**

ದೈಹಿಕ ಸಾಮರ್ಥ್ಯ ಪರೀಕ್ಷೆಯು ಈ ಕೆಳಗಿನವುಗಳನ್ನು ಒಳಗೊಂಡಿರುತ್ತದೆ:

<table>
<tr><th>ವಿಷಯಾಂಶ</th><th>ಅರ್ಹತಾದಾಯಕ ಸಮಯ/ದೂರ</th></tr>
<tr><td>100 ಮೀಟರುಗಳ ಓಟ</td><td>15 ಸೆಕೆಂಡುಗಳು</td></tr>
<tr><td>ಉದ್ದ ಜಿಗಿತ</td><td>3.80 ಮೀಟರುಗಳಿಗೆ ಕಡಿಮೆ ಇಲ್ಲದಷ್ಟು</td></tr>
<tr><td>ಗುಂಡು ಎಸೆತ<br>(7.26 ಕೆ.ಜಿ.)</td><td>5.60 ಮೀಟರುಗಳಿಗೆ ಕಡಿಮೆ ಇಲ್ಲದಷ್ಟು</td></tr>
</table>

**IV. ನೀರು ತರುವವರು ಮತ್ತು ಕಸಗುಡಿಸುವವರಿಗಾಗಿ ದೈಹಿಕ ದಾರ್ಢ್ಯತೆ ಪರೀಕ್ಷೆ:–**

ಐದು ಕಿ.ಮೀ.ಗಳ ಓಟ.

</td></tr>
</table>

<table>
<tr><th>(1)</th><th>(2)</th><th>(3)</th><th>(4)</th><th>(5)</th><th>(6)</th><th>(7)</th></tr>
<tr>
<td>19</td>
<td>ಸೇವಕಿಯರು (ಮಹಿಳೆ) ಕೆಎಸ್‌ಆರ್‌ಪಿ/ಐಆರ್‌ಬಿ ದೋಬಿಗಳು, ಅಡಿಗೆಯವರು, ನೀರು ತರುವವರು, ಟೈಲರುಗಳು, ಕಸಗುಡಿಸುವವರು (ಒಣ/ಹಸಿ),<br><br>(ರೂ.5200–8200)</td>
<td>24</td>
<td>–</td>
<td>24</td>
<td>ನೇರ ನೇಮಕಾತಿಯಿಂದ:–<br><br>ಸೇವಕಿಯರ ಎಲ್ಲಾ ವಿಭಾಗಗಳಿಗೆ ನೇರ ನೇಮಕಾತಿಯನ್ನು ಐ.ಜಿ.ಪಿ., ಕೆಎಸ್‌ಆರ್‌ಪಿ ಇವರು ರಚಿಸಿದ ಈ ಕೆಳಗಿನವರುಗಳನ್ನು ಒಳಗೊಂಡ ಆಯ್ಕೆ ಪ್ರಾಧಿಕಾರದಿಂದ ಮಾಡತಕ್ಕದ್ದು.<br>(i) ಡೆಪ್ಯೂಟಿ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕೆ.ಎಸ್.ಆರ್.ಪಿ. – ಅಧ್ಯಕ್ಷರು<br>(ii) ಕೆಎಸ್‌ಆರ್‌ಪಿಯ ಇಬ್ಬರು ಕಮಾಂಡೆಂಟ್‌ಗಳು – ಸದಸ್ಯರು<br><br>ಆಯ್ಕೆ ಪ್ರಾಧಿಕಾರವು ಅಧಿಕೃತ ರಾಜ್ಯ ಪತ್ರದಲ್ಲಿ ಅಧಿಸೂಚನೆ ಹೊರಡಿಸುವ ಮೂಲಕ, ರಾಜ್ಯವ್ಯಾಪಿ ಪ್ರಸಾರವುಳ್ಳ ಒಂದು ಕನ್ನಡ ದಿನಪತ್ರಿಕೆಯಲ್ಲಿ ಮತ್ತು ಒಂದು ಇಂಗ್ಲೀಷ್ ದಿನಪತ್ರಿಕೆಯಲ್ಲಿ, ಹೀಗೆ ಎರಡು ದಿನ ಪತ್ರಿಕೆಗಳಲ್ಲಿ ಪ್ರಕಟಣೆ ಹೊರಡಿಸುವ ಮೂಲಕ ಮತ್ತು ಅಂತರ್‌ಜಾಲ ಮತ್ತು ವಿದ್ಯುನ್ಮಾನ ಮಾಧ್ಯಮದ ಮೂಲಕ ಎಲ್ಲ ಅರ್ಹ ಮಹಿಳಾ ಅಭ್ಯರ್ಥಿಗಳಿಂದ ಈ ನಿಯಮಗಳ ಅಡಿಯಲ್ಲಿ ನೇಮಕಾತಿಯ ಉದ್ದೇಶಕ್ಕಾಗಿ ನಿಗದಿ ಪಡಿಸಬಹುದಾದ ನಮೂನೆಯಲ್ಲಿ ಅರ್ಜಿಗಳನ್ನು ಆಹ್ವಾನಿಸತಕ್ಕದ್ದು.<br><br>ಅಭ್ಯರ್ಥಿಗಳು ದೈಹಿಕ ಸಾಮರ್ಥ್ಯ ಪರೀಕ್ಷೆಗೆ ಹಾಜರಾಗತಕ್ಕದ್ದು.<br>ಸೇವಕಿಯರಿಗಾಗಿ<br><br>ಟಿಪ್ಪಣಿ (1): ಉದ್ದ ಜಿಗಿತ ಮತ್ತು ಗುಂಡು ಎಸೆತಗಳಲ್ಲಿ ಅರ್ಹತೆ ಪಡೆಯಲು ಅಭ್ಯರ್ಥಿಯು ಗರಿಷ್ಠ ಮೂರು ಪ್ರಯತ್ನಗಳನ್ನು ಉಪಯೋಗಿಸಿಕೊಳ್ಳಬಹುದು.<br><br>ಟಿಪ್ಪಣಿ (2): ಅಭ್ಯರ್ಥಿಗಳು ಎಲ್ಲಾ ಮೂರು ಪರೀಕ್ಷೆಗಳಲ್ಲಿ ಅರ್ಹರಾಗತಕ್ಕದ್ದು.<br><br>ದೈಹಿಕ ದಾರ್ಢ್ಯತೆ ಪರೀಕ್ಷೆ:–<br><br>ನೀರು ತರುವವರು ಮತ್ತು ಕಸ ಗುಡಿಸುವವರ ಆಯ್ಕೆಯನ್ನು ಬಹಿರಂಗ ದಾರ್ಢ್ಯತೆ ಪರೀಕ್ಷೆ ಮೂಲಕ ಮಾಡತಕ್ಕದ್ದು. ಅಭ್ಯರ್ಥಿಗಳನ್ನು ವೈಯಕ್ತಿಕ ಕಾಲ ನಿಯಮನದ ಆಧಾರದ ಮೇಲೆ ಆಯ್ಕೆ ಮಾಡಲಾಗುವುದು.</td>
<td>I ಶೈಕ್ಷಣಿಕ ಅರ್ಹತೆ:–<br><br>ಏಳನೇ ತರಗತಿಯಲ್ಲಿ ಉತ್ತೀರ್ಣರಾಗಿರ ಬೇಕು.<br><br>II. ವಯೋಮಿತಿ:–<br><br>ಕರ್ನಾಟಕ ಸಿವಿಲ್ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು, 1977ರ 6ನೇ ನಿಯಮದಲ್ಲಿ ಏನೇ ಇದ್ದಾಗ್ಯೂ, ಹದಿನೆಂಟು(18) ವರ್ಷ ವಯಸ್ಸು ಪೂರ್ಣಗೊಂಡಿರಬೇಕು. ಆದರೆ–<br><br>ಪರಿಶಿಷ್ಟ ಜಾತಿಗಳು, ಪರಿಶಿಷ್ಟ ಪಂಗಡಗಳು ಮತ್ತು ಇತರೆ ಹಿಂದುಳಿದ ಪ್ರವರ್ಗಗಳ ಪ್ರಕರಣಗಳಲ್ಲಿ ಮೂವತ್ತೈದು ವರ್ಷ ವಯಸ್ಸನ್ನು; ಮತ್ತು ಇತರರ ಪ್ರಕರಣಗಳಲ್ಲಿ ಮೂವತ್ತು ವರ್ಷ ವಯಸ್ಸನ್ನು ಮೀರಿರಬಾರದು.<br><br>III. ದೈಹಿಕ ಸಾಮರ್ಥ್ಯ ಪರೀಕ್ಷೆಗಳು:–<br><br>ದೈಹಿಕ ಸಾಮರ್ಥ್ಯ ಪರೀಕ್ಷೆಯು ಈ ಕೆಳಗಿನವುಗಳನ್ನು ಒಳಗೊಂಡಿರುತ್ತದೆ.<br><br>
<table>
<tr><th>ವಿಷಯಾಂಶ</th><th>ಅರ್ಹತಾದಾಯಕ ಸಮಯ/ದೂರ</th></tr>
<tr><td>100 ಮೀಟರುಗಳ ಓಟ</td><td>18.5 ಸೆಕೆಂಡುಗಳು</td></tr>
<tr><td>ಉದ್ದ ಜಿಗಿತ</td><td>2.50 ಮೀಟರುಗಳಿಗೆ ಕಡಿಮೆ ಇಲ್ಲದಷ್ಟು</td></tr>
<tr><td>ಗುಂಡು ಎಸೆತ<br>(4 ಕೆ.ಜಿ.)</td><td>3.75 ಮೀಟರುಗಳಿಗೆ ಕಡಿಮೆ ಇಲ್ಲದಷ್ಟು</td></tr>
</table>
<br>IV. ನೀರು ತರುವವರು ಮತ್ತು ಕಸಗುಡಿಸುವವರಿಗೆ ದೈಹಿಕ ದಾರ್ಢ್ಯತೆ ಪರೀಕ್ಷೆ:–<br><br>ಒಂದು ಕಿ.ಮೀ. ಓಟ.</td>
</tr>
</table>

| (1) | (2) | (3) | (4) | (5) | (6) | (7) |
|---|---|---|---|---|---|---|
| | | | | | **ವೃತ್ತಿ ಪ್ರಾಯೋಗಿಕ ಪರೀಕ್ಷೆ:–**<br>ನೀರು ತರುವವರು ಮತ್ತು ಕಸಗುಡಿಸುವವರನ್ನು ಹೊರತುಪಡಿಸಿ, ಇತರಅಭ್ಯರ್ಥಿಗಳು, ಪ್ರತಿಯೊಂದು ವೃತ್ತಿಗಾಗಿ ಸಮಿತಿಯು ನಡೆಸುವ ಪ್ರಾಯೋಗಿಕ ಪರೀಕ್ಷೆಗೆ ಒಳಪಡತಕ್ಕದ್ದು. ಅರ್ಹರಾದಂತಹವರನ್ನು ಆಯಾ ವೃತ್ತಿಗೆ ಸಂಬಂಧಿಸಿದ ಪರೀಕ್ಷೆಯಲ್ಲಿ ಪಡೆದ ಅಂಕಗಳನ್ನು ಆಧರಿಸಿ, ಆಯ್ಕೆಗೆ ಪರಿಗಣಿಸಲಾಗುವುದು.<br>**ನೇಮಕಾತಿ:**<br>ಆಯ್ಕೆ ಸಮಿತಿಯು ಅಂತಿಮ ಆಯ್ಕೆ ಪಟ್ಟಿಯನ್ನು ತಯಾರಿಸತಕ್ಕದ್ದು ಮತ್ತು ಪ್ರಕಟಿಸತಕ್ಕದ್ದು.<br>ಬ್ಯಾಟಲಿಯನ್ನುಗಳಿಗೆ ಅಭ್ಯರ್ಥಿಗಳ ಹಂಚಿಕೆಯನ್ನು, ವಿವಿಧ ಪ್ರವರ್ಗಗಳ ಅಡಿಯಲ್ಲಿ ಲಭ್ಯವಿರುವ ಖಾಲಿಸ್ಥಾನಗಳು, ಅರ್ಹತೆ ಮತ್ತು ಅಭ್ಯರ್ಥಿಯ ಆದ್ಯತೆಯನ್ನು ಆಧರಿಸಿ ಮಾಡಲಾಗುವುದು.<br>ಹಾಗೆ ಸಿದ್ಧಪಡಿಸಲಾದ ಮತ್ತು ಪ್ರಕಟಿಸಲಾದ ಅಭ್ಯರ್ಥಿಗಳ ಅಂತಿಮ ಆಯ್ಕೆ ಪಟ್ಟಿಯನ್ನು, ಅಭ್ಯರ್ಥಿಗಳು ಅಂಥ ನೇಮಕಾತಿಗೆ ಎಲ್ಲ ರೀತಿಯಲ್ಲಿ ಸೂಕ್ತರಾಗಿದ್ದಾರೆಂದು ಮನದಟ್ಟು ಮಾಡಿಕೊಂಡ ಮೇಲೆ, ಪಟ್ಟಿಯಲ್ಲಿ ಅವರ ಹೆಸರುಗಳು ಕಂಡುಬರುವ ಕ್ರಮದಲ್ಲಿ, ನಿರ್ದಿಷ್ಟ ಪ್ರವರ್ಗದ ಖಾಲಿ ಹುದ್ದೆಗಳಿಗೆ ನೇಮಕ ಮಾಡಲು ನೇಮಕಾತಿ ಪ್ರಾಧಿಕಾರಕ್ಕೆ ಕಳುಹಿಸತಕ್ಕದ್ದು. | |
| | **ಒಟ್ಟು** | **12,776** | **–** | **12,776** | | |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

# ವಿಶೇಷ ಪತ್ರಿಕೆ

| ಭಾಗ – **IV-A** | ಬೆಂಗಳೂರು, ಶುಕ್ರವಾರ, ಆಗಸ್ಟ್ ೧೨, ೨೦೧೧ (ಶ್ರಾವಣ ೨೧, ಶಕ ವರ್ಷ ೧೯೩೩) | ನಂ. ೫೪೨ |
|---|---|---|

## ಸಾರಿಗೆ ಸಚಿವಾಲಯ

### ಅಧಿಸೂಚನೆ

**ಸಂ: ಹೆಚ್‌ಟಿಡಿ 4 ಟಿಎಮ್‌ಐ 2003, ಬೆಂಗಳೂರು, ದಿನಾಂಕ:10-08-2011**

ಕರ್ನಾಟಕ ರಾಜ್ಯ ಮತ್ತು ಕೇಂದ್ರಾಡಳಿತ ಪ್ರದೇಶವಾದ ಪಾಂಡಿಚೇರಿಯೊಂದಿಗೆ ಮಜಲು ವಾಹನಗಳು, ಸರಕು ವಾಹನಗಳು ಮತ್ತು ಮೋಟಾರು ಕ್ಯಾಬ್‌ಗಳನ್ನು ಸಾರ್ವಜನಿಕರಿಗೆ ಆರ್ಥಿಕವಾಗಿ ಮತ್ತು ಸುಸಂಘಟಿತವಾಗಿ ಮಜಲು ವಾಹನ, ಸರಕು ವಾಹನ, ಹಾಗೂ ಮೋಟಾರು ಕ್ಯಾಬ್‌ಗಳ ಸೇವೆಯನ್ನು ಎರಡೂ ರಾಜ್ಯಗಳ ಮಾರ್ಗಗಳಲ್ಲಿ ಓಡಿಸುವ ಬಗ್ಗೆ ಪರಸ್ಪರ ಸಾರಿಗೆ ಒಪ್ಪಂದವನ್ನು 1988ನೇ ಮೋಟಾರು ವಾಹನ ಕಾಯ್ದೆ ಪ್ರಕರಣ 88(5)ರ ಅಡಿಯಲ್ಲಿ ಸೂಚಿಸಿರುವಂತೆ ಪ್ರಸ್ತಾಪಿಸಲಾಗಿದೆ.

ಕರ್ನಾಟಕ ರಾಜ್ಯ ಮತ್ತು ಕೇಂದ್ರಾಡಳಿತ ಪ್ರದೇಶವಾದ ಪಾಂಡಿಚೇರಿಗಳ ನಡುವೆ ಪ್ರಥಮ ಪೂರಕ ಅಂತರರಾಜ್ಯ ಪರಸ್ಪರ ಸಾರಿಗೆ ಒಪ್ಪಂದದ ಕರಡು ಅಧಿಸೂಚನೆಯನ್ನು 1988ರ ಮೋಟಾರು ವಾಹನ ಕಾಯ್ದೆಯ ಪ್ರಕರಣ 88ರ ಉಪ ಪ್ರಕರಣ (5) ರಲ್ಲಿ ಅಗತ್ಯಪಡಿಸಿರುವಂತೆ ದಿನಾಂಕ: 10.03.2000ರ ಅಧಿಸೂಚನೆ ಸಂಖ್ಯೆ:ಒಸಾಇ 21 ಟಿಎಮ್‌ಐ 1998 ರಲ್ಲಿ ತೊಂದರೆಗೆ ಒಳಗಾಗಬಹುದಾದ ಎಲ್ಲಾ ವ್ಯಕ್ತಿಗಳ ಮಾಹಿತಿಗಾಗಿ ದಿನಾಂಕ: 13.03.2000 ರಲ್ಲಿ ಕರ್ನಾಟಕ ರಾಜ್ಯ ವಿಶೇಷ ಪತ್ರದಲ್ಲಿ ಪ್ರಕಟಿಸಿ 30 ದಿನಗೊಳಗಾಗಿ ಆಕ್ಷೇಪಣೆ/ಸಲಹೆಗಳನ್ನು ಆಹ್ವಾನಿಸಲಾಗಿತ್ತು.

ಕರಡು ಅಧಿಸೂಚನೆಗೆ ಸಂಬಂಧಿಸಿದಂತೆ ಸ್ವೀಕರಿಸಲಾದ ಆಕ್ಷೇಪಣೆ/ಸಲಹೆಗಳನ್ನು ಸರ್ಕಾರವು ದಿನಾಂಕ:10.05.2000 ರಂದು ಆಲಿಸಿ ಪರಿಗಣಿಸಲಾಯಿತು. ಆದ್ದರಿಂದ ಈಗ ಸರ್ಕಾರವು ಮೋಟಾರು ವಾಹನ ಕಾಯ್ದೆ 1988ರ ಪ್ರಕರಣ 88(6) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಮತ್ತು ಕೇಂದ್ರಾಡಳಿತ ಪ್ರದೇಶವಾದ ಪಾಂಡಿಚೇರಿಯೊಂದಿಗೆ ನಡುವೆ ಏರ್ಪಟ್ಟಿರುವ ಪ್ರಥಮ ಒಪ್ಪಂದವನ್ನು ಈ ಕೆಳಗಿನಂತೆ ಪ್ರಕಟಿಸಲಾಗಿದೆ.

**ಕರ್ನಾಟಕ ರಾಜ್ಯ ಮತ್ತು ಕೇಂದ್ರಾಡಳಿತ ಪ್ರದೇಶವಾದ ಪಾಂಡಿಚೇರಿಯೊಂದಿಗೆ ಮಾಡಿಕೊಳ್ಳುವ ಅಂತರ ರಾಜ್ಯ ಒಪ್ಪಂದ**

10ನೇ ಆಗಸ್ಟ್ 2011ರ ದಿನದಂದು ಕರ್ನಾಟಕ ರಾಜ್ಯಪಾಲರು (ಇಲ್ಲಿ ಇನ್ನು ಮುಂದೆ ಕರ್ನಾಟಕ ಸರ್ಕಾರ ಎಂದು ಕರೆಯಲಾಗಿದೆ ಮತ್ತು ಈ ಪದೋಕ್ತಿಯ ಸಂದರ್ಭವು ಅವಕಾಶವಿತ್ತಲ್ಲಿ ಅವರ ಅಧಿಕಾರ ಸ್ಥಾನಕ್ಕೆ ಉತ್ತರಾಧಿಕಾರಿಯಾಗಿ ಬರುವವರನ್ನು ಒಳಗೊಳ್ಳುತ್ತದೆ) ಒಬ್ಬ ಪಕ್ಷಕಾರರಾಗಿ ಮತ್ತು ಕೇಂದ್ರಾಡಳಿತ ಪ್ರದೇಶವಾದ ಪಾಂಡಿಚೇರಿ ಸೇನಾನಿ ರಾಜ್ಯಪಾಲರನ್ನು (ಇಲ್ಲಿ ಇನ್ನು ಮುಂದೆ ಪಾಂಡಿಚೇರಿ ಸರ್ಕಾರ ಎಂದು ಕರೆಯಲಾಗಿದೆ) ಮತ್ತು ಆ ಪದೋಕ್ತಿಯ ಸಂದರ್ಭವು ಅವಕಾಶವಿತ್ತಲ್ಲಿ ಅವರ ಅಧಿಕಾರ ಸ್ಥಾನಕ್ಕೆ ಉತ್ತರಾಧಿಕಾರಿಯಾಗಿ ಬರುವವರನ್ನು ಒಳಗೊಳ್ಳುತ್ತದೆ) ಇನ್ನೊಬ್ಬ ಪಕ್ಷಕಾರರಾಗಿ ಪರಸ್ಪರ ಒಪ್ಪಂದವಾಗಿ ಮಾಡಿಕೊಳ್ಳಲು ಕರ್ನಾಟಕ ಸರ್ಕಾರ ಪ್ರಸ್ತಾಪಿಸಿದೆ.

**1) ಮಜಲು ವಾಹನಗಳು:**

ಕರ್ನಾಟಕ ರಾಜ್ಯ ಮತ್ತು ಪಾಂಡಿಚೇರಿ (ಕೇಂದ್ರಾಡಳಿತ ಪ್ರದೇಶ) ಈ ಕೆಳಕಂಡ ಮಾರ್ಗಗಳಲ್ಲಿ ಪ್ರವರ್ತಿಸತಕ್ಕದ್ದು.

ಅ) ಕರ್ನಾಟಕ ರಾಜ್ಯ ಸ್ವಾಮ್ಯ ಸಂಸ್ಥೆಯು ಅನುಬಂಧ-ಎ ರಲ್ಲಿ ಸೂಚಿಸಿರುವ ಮಾರ್ಗಗಳಲ್ಲಿ.

ಆ) ಪಾಂಡಿಚೇರಿ ಪ್ರವಾಸೋದ್ಯಮ ಮತ್ತು ಸಾರಿಗೆ ಅಭಿವೃದ್ಧಿ ನಿಗಮದವರು ಅಥವಾ ರಾಜ್ಯ ಸ್ವಾಮ್ಯ ಸಂಸ್ಥೆಯು ಪ್ರಾರಂಭವಾಗುವವರೆಗೆ ಅನಬಂಧ-ಬಿ ಯಲ್ಲಿ ಸೂಚಿಸಿರುವ ಮಾರ್ಗಗಳಲ್ಲಿ,

ಇ) ದರ ಮತ್ತು ಸರಕು ಬಾಡಿಗೆಗಳನ್ನು ಉಭಯ ರಾಜ್ಯಗಳ ಪ್ರವರ್ತಕರು ಸಮಾನವಾಗಿ ವಿಧಿಸಲು.

ಈ) ಕರ್ನಾಟಕ ರಾಜ್ಯ ಮತ್ತು ಪಾಂಡಿಚೇರಿ ಕೇಂದ್ರಾಡಳಿತ ಪ್ರದೇಶಗಳ ಸಂಬಂಧಪಟ್ಟ ಪ್ರಾಧಿಕಾರಗಳು ಹೆಚ್ಚುವರಿ ವಾಹನಗಳ (ಸ್ಪೇರ್) ಏಕಬಿಂದು ತೆರಿಗೆ ಆಧಾರದ ಮೇಲೆ ಅಪಘಾತ ಅಥವಾ ಇತರೆ ಸಂದರ್ಭಗಳಲ್ಲಿ ಪ್ರವರ್ತಿಸಲು ರಹದಾರಿಗಳ ಬದಲಿಗೆ ಈ ವಾಹನಗಳನ್ನು ಕೆಳಕಂಡ ನಿಬಂಧನೆಗಳೊಡನೆ ಓಡಿಸಬಹುದು.

1. ಅಂತರರಾಜ್ಯ ಸಾರಿಗೆ ಒಪ್ಪಂದದಲ್ಲಿ ಅನುಮತಿಸಿದ ರಹದಾರಿಗಳಿಗೆ ನಿಗದಿಪಡಿಸಲಾದ ಟ್ರಿಪ್ಪುಗಳು ಮತ್ತು ವಾಹನಗಳ ಮಿತಿಯನ್ನು ಮೀರತಕ್ಕದ್ದಲ್ಲ.
2. ಅಂತಹ ಹೆಚ್ಚುವರಿ (ಸ್ಪೇರ್) ವಾಹನಗಳು, ಈ ಬಗ್ಗೆ ಸಂಬಂಧಿಸಿದ ರಾಜ್ಯ ಸಾರಿಗೆ ಸಂಸ್ಥೆಗಳಿಂದ ನೀಡಲಾದ ಪ್ರಮಾಣ ಪತ್ರವನ್ನು ಪ್ರದರ್ಶಿಸತಕ್ಕದ್ದು, ಹಾಗೂ ಈ ಸಂದರ್ಭಗಳಲ್ಲಿ ಉಪಯೋಗಿಸಲ್ಪಟ್ಟ ವಾಹನಗಳ ಬಗ್ಗೆ ಸಂಬಂಧಪಟ್ಟ ರಾಜ್ಯ ಸ್ವಾಮ್ಯದವರು 15 ದಿವಸಗಳ ಒಳಗಾಗಿ ಸಂಬಂಧಪಟ್ಟ ಪ್ರಾಧಿಕಾರಕ್ಕೆ ಮಾಹಿತಿ ನೀಡತಕ್ಕದ್ದು.

ಉ) ಅಂತರ ರಾಜ್ಯ ಮಾರ್ಗಗಳ ರಹದಾರಿಗಳಿಗೆ ಸಂಬಂಧಿಸಿದಂತೆ ಅಯಾಯ ಪ್ರಾಧಿಕಾರದ ವ್ಯಾಪ್ತಿಯಲ್ಲಿ ರಹದಾರಿಯ ಮಾರ್ಪಾಟನ್ನು ಮಾಡಿದಲ್ಲಿ ಸಂಬಂಧಪಟ್ಟ ಪ್ರಾಧಿಕಾರಗಳ ಗಮನಕ್ಕೆ ತರತಕ್ಕದ್ದು. ರಹದಾರಿಯ ಮಾರ್ಪಾಟು ಅಂತರ ರಾಜ್ಯ ಮಾರ್ಗಕ್ಕೆ ಸಂಬಂಧಿಸಿದ್ದರೆ ಉಭಯ ರಾಜ್ಯಗಳ ರಾಜ್ಯ ಸಾರಿಗೆ ಪ್ರಾಧಿಕಾರಗಳ ಪರಸ್ಪರ ಒಪ್ಪಂದದಲ್ಲಿ ತೀರ್ಮಾನಿಸತಕ್ಕದ್ದು.

ಊ) ವಾಹನಗಳ ಬದಲಾವಣೆಯನ್ನು ಬೇರೊಂದು ವಾಹನಗಳ ಬದಲಾವಣೆ ಮಾಡುವಾಗ ಮೇಲು ಸಹಿಯಲ್ಲಿಯೂ ಸಹ ಹಿಂಬರಹ ಮಾಡಿ ಸಂಬಂಧಿಸಿದ ರಾಜ್ಯ ಸಾರಿಗೆ ಪ್ರಾಧಿಕಾರಕ್ಕೆ ನೋಂದಣಿ ಸಂಖ್ಯೆ ಮತ್ತು ಆಸನಗಳ ವಿವರಗಳನ್ನು ನೀಡತಕ್ಕದ್ದು.

ಋ) **ತೆರಿಗೆ:** ಉಭಯ ರಾಜ್ಯಗಳ ವಾಹನಗಳು ಮೇಲು ಸಹಿಯನ್ನು ಪಡೆದಿದ್ದಲ್ಲಿ ಪಾವತಿಸತಕ್ಕಂತಹ ತೆರಿಗೆಯಿಂದ ವಿನಾಯಿತಿ ನೀಡಿ, ಈ ವಿನಾಯಿತಿಯೂ ಮಜಲು ವಾಹನಗಳ ಸಾಮಾನ್ಯ ಅಥವಾ ತಾತ್ಕಾಲಿಕ ಪರವಾನಿಗೆಗಳಿಗೂ ಸಹ ಅನ್ವಯಿಸತಕ್ಕದ್ದು ಮತ್ತು ರಹದಾರಿಯ ಮಾರ್ಪಾಟು ವಿಸ್ತರಣೆ ಮಾರ್ಗದ ಕಡಿತ ಅಥವಾ ಟ್ರಿಪ್ಪುಗಳ ಮಾದರಿಗಳಿಗೂ ಸಹ ತೆರಿಗೆ ವಿನಾಯಿತಿ ಅನ್ವಯಿಸತಕ್ಕದ್ದು.

**2) ಸರಕು ವಾಹನ:**

1988ನೇ ಮೋಟಾರು ವಾಹನ ಕಾಯ್ದೆಯ ಪ್ರಕರಣ 88(5)ರ ಅಡಿಯಲ್ಲಿ ಪ್ರಸ್ತಾಪಿಸಿರುವಂತೆ ವಾರ್ಷಿಕ ದ್ವಿಪಕ್ಷೀಯ ತೆರಿಗೆ ರೂ.1500.00 ಗಳನ್ನು ಪಾವತಿಸುವ ಆಧಾರದ ಮೇಲೆ ತಲಾ 200 ರಹದಾರಿಗಳನ್ನು ಮೇಲು ಸಹಿ ಮಾಡಲು ಮತ್ತು ಮೇಲು ಸಹಿ ಪಡೆದ ವಾಹನಗಳು ಮರು ಪ್ರಯಾಣದಲ್ಲಿ ಆಯಾಯ ರಾಜ್ಯ ಮತ್ತು ಕೇಂದ್ರಾಡಳಿತ ಪ್ರದೇಶಗಳ ನಡುವೆ ಸರಕುಗಳನ್ನು ಇಳಿಸುವುದಾಗಲೀ ಅಥವಾ ತುಂಬುವುದಾಗಲೀ ಮಾಡತಕ್ಕದ್ದಲ್ಲ.

**3) ಮೋಟಾರು ಕ್ಯಾಬ್‌ಗಳು:**

ರಾಜ್ಯ ಮತ್ತು ಕೇಂದ್ರಾಡಳಿತ ಪ್ರದೇಶದವರು ತಲಾ 300 ಮೋಟಾರು ಕ್ಯಾಬ್‌ಗಳ ಪರ್ಮಿಟ್‌ಗಳ ಕೋಟಾವನ್ನು ಏಕಬಿಂದು ತೆರಿಗೆ ಆಧಾರದ ಮೇಲೆ ಮೇಲುಸಹಿ ಮಾಡಲು.

**4) ಸಾಮಾನ್ಯ:**

(ಅ) ಆಯಾಯ ರಾಜ್ಯಗಳು ನಿಗಧಿಪಡಿಸಿರುವ ವೇಗ, ತೂಕ, ಆಸನ, ಅಳತೆ ಮತ್ತು ನಿರ್ಭಂದಿಸಲಾದ ರಸ್ತೆಗಳನ್ನು ಪ್ರವರ್ತಕರು ಪಾಲಿಸಲು ಒಪ್ಪಂದವನ್ನು ಪ್ರಸ್ತಾಪಿಸಲಾಗಿದೆ. ಕರ್ನಾಟಕ ರಾಜ್ಯ ಮತ್ತು ಪಾಂಡಿಚೇರಿ ಕೇಂದ್ರಾಡಳಿತ ಪ್ರದೇಶದ ಪರಸ್ಪರ ಒಪ್ಪಿಗೆ ಮೇಲೆ ಯಾವುದೇ ಹಂತದಲ್ಲಾದರೂ ಈ ಒಪ್ಪಂದದ ಯಾವುದೇ ನಿಬಂಧನೆಯನ್ನು ಕೈ ಬಿಡುವುದು ತಿದ್ದುಪಡಿ ಅಥವಾ ಸೇರ್ಪಡೆ ಮಾಡಬಹುದು.

(ಆ) ಈ ಒಪ್ಪಂದವನ್ನು ಅಂತಿಮಗೊಳಿಸುವುದನ್ನು ಬಾಕಿ ಇಟ್ಟು, ಈ ಒಪ್ಪಂದದ ಅನುಭಂಧ–'ಎ' ಮತ್ತು 'ಬಿ' ಯಲ್ಲಿ ಸೂಚಿಸಿರುವ ಬಸ್ಸುಗಳನ್ನು ಏಕ ಬಿಂದು ತೆರಿಗೆ ಪಾವತಿ ಆಧಾರದ ಮೇಲೆ ಈ ಒಪ್ಪಂದಕ್ಕೆ ಸಹಿ ಹಾಕಿದ ದಿನಾಂಕದಿಂದ ಕರ್ನಾಟಕ ರಾಜ್ಯ ಸ್ವಾಮ್ಯ ಸಂಸ್ಥೆ ಮತ್ತು ಪಾಂಡಿಚೇರಿ ಪ್ರವಾಸೋದ್ಯಮ ಮತ್ತು ಸಾರಿಗೆ ಅಭಿವೃದ್ಧಿ ನಿಗಮದವರು ಓಡಿಸಬಹುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ರಾಮಚಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ
ಸಾರಿಗೆ ಇಲಾಖೆ

*Annexure - A*

**ROUTES TO BE OPERATED BY THE S.T.U. OF KARNATAKA**

| Sl. No. | Route With via Places | Route Length | | | | No. of Round Trips | No. of Buses | Service Kms.in Pondy |
|---|---|---|---|---|---|---|---|---|
| | | KTK | TN | PONDY | TOTAL | | | |
| 1. | Bangalore-Pondicherry via Hosur, krishnagiri, thiruvannamalai, Gingee, Tindivanam. | 35 | 251 | 19 | 305 | 2 | 2 | 76 |
| 2. | Bangalore-Mahe Via Mysore, Thalaserry | 273 | 64 | 6 | 343 | 2 | 2 | 24 |
| 3. | Bangalore-Thirunallar Via Hosur, Krishnagiri, Thiruvannamalai, Chidambaram, Karaikal. | 35 | 382 | 18 | 435 | 2 | 4 | 72 |
| **Total** | | | | | | **6** | **8** | **172** |

**Ramachandra**
Under secretary to Government,
Transport Department

**Annexure-B**

**ROUTES TO BE OPERATED BY THE PONDICHERRY TOURISM AND TRANSPORT DEVELOPMENT CORPORATION**

| Sl. No. | Route With via Places | Route Length | | | | No. of Round Trips | No. of Buses | Service Kms.in KTK |
|---|---|---|---|---|---|---|---|---|
| | | PONDY | TN | KTK | TOTAL | | | |
| 1. | Pondicherry-Bangalore via Villupuram, Vettavalam, Thiruvannamalai, Krishnagiri, Hosur. | 25 | 246 | 35 | 306 | 2 | 2 | 140 |
| 2. | Pondicherry-Mahe via Villupuram, Vettavalam, thiruvannamalai, Krishnagiri, Hosur, Bangalore, Mysore, Thalaserry | 6 (Kerala-84 kms) | 246 (Kerala-84 kms) | 308 (Kerala-84 kms) | 624 | 1 | 2 | 616 |
| 3. | Mahe-Kollur via Thalaserry, Kannur, Kasargod, Mangalore, Kundapura | 6 (Kerala-173 kms) | 0 (Kerala-173 kms) | 129 (Kerala-173 kms) | 135 | 1 | 2 | 258 |
| 4. | Mahe-Mysore via Thalaserry | 6 (Kerala-64 kms) | 0 (Kerala-64 kms) | 167 (Kerala-64 kms) | 237 | 1 | 2 | 334 |
| 5. | Pondicherry-Kollur via Vllupuram, Krishnagiri, Hosur, Bangalore, Arsikere Shimoga, Thirthahalli | 25 | 246 | 524 | 795 | 1 | 2 | 1048 |
| **Total** | | | | | | **6** | **10** | **2396** |

**Ramachandra**
Under secretary to Government,
Transport Department

# TRANSPORT SECRETARIAT

## NOTIFICATION

### No. HTD 4 TMI 2003, Bangalore, dated: 10-08-2011

WHEREAS, the State of Karnataka and the Union Territory of Pondicherry propose to enter into reciprocal Agreement for operation of stage carriages, Goods Carriages and Motor Cabs on the Inter State Route by the operators of both state and Union Territory and facilitate the people of this State and Union Territory to have efficient, economical and co-ordinated stage carriages, goods carriage and motor cab etc., Services on the Inter State Routes from Karnataka to Pondicherry and Pondicherry to Karnataka under Sub-section (5) of section 88 of the Motor Vehicles Act, 1988.

And whereas, the first Inter-State Reciprocal Transport Agreement between the State of Karnataka and Union-territory of Pondicherry has been published vide Notification No:HTD 21 TMI 1998, Dated:10.03.2000 as required by sub-section (5) of Section 88 of the Motor-Vehicles Act, 1988 (Central Act, 59 of 1988) in the Karnataka Gazette extraordinary dated:13.03.2000 for the information of all persons, to make representations and suggestions if any within 30 days from the date of publication in the Karnataka Gazette.

And whereas the representations/suggestions received in response to the draft Notification were heard and considered by the Government on 10.05.2000. Now, therefore, in exercise of the powers conferred by sub-section (6) of section 88 of Motor Vehicle act 1988 (Act 59 of 1988). The Government of Karnataka hereby publish the following agreement arrived at between the State of Karnataka and Union Territory of Pondicherry, namely:-

**INTER STATE RECIPROCAL TRANSPORT AGREEMENT BETWEEN THE STATE OF KARNATAKA AND UNION TERRITORY OF PONDICHERRY:**

This agreement is made on this day the 10th August 2011 between the Governor of Karnataka (here in after call the Government of Karnataka which expression shall where the context so admits, include his successors in office) on one hand and the Lt. Governor of Union Territory of Pondicherry (here in after called the Government of Pondicherry).

Government of Pondicherry which expression shall where the context so admits, include his successors in office) on the other hand subject to the conditions as indicated below:-

**I. State Carriage Services:-** Inter State Route for operation of stage carriage and both the State and Union Territory shall be as shown below:

(a) The Karnataka State Transport Undertaking shall operate the services on the routes shown in Annexure 'A'.

(b) The Pondicherry Tourism and Transport Development Corporation Limited shall operate the services on the route as shown in Annexure 'B' till such time and state Transport Undertaking is formed in Pondicherry.

(c) The fares and frights charged by an operator in the reciprocating state shall be the same as those charged by the operators of that state for similar services.

(d) The competent authorities of both the State and Union Territory shall issue spare bus permits for operation as substitute on single point tax in the event of break down or accident of regular permitted stage carriage of State Transport Undertaking subject to the mentioned below conditions;

 i) That the number of buses and trips on any route do not exceed the permitted limit and

 ii) That the vehicles so operated shall exhibit a certificate issued to the extent of the above condition by the concerned State Transport Undertaking of the respective states. Intimation to this effect shall be sent to the Reciprocating Transport Authorities within a fortnight from the date of such operation.

(e) Variation of that part of an interstate route which lies exclusively in the area of the primary authority may be made by the State Transport Authority concerned subject to the condition that such variation shall be brought to the notice of the State Transport Authority of the reciprocating State. In case, the variation sought for is in the reciprocating State, it shall be decided on mutual concent of both the State Transport Authorities.

(f) The replacement of a vehicle by another vehicle may be noted in the counter signature slip by the Home State Authorities and intimation sent to the State Transport Authority of the reciprocating State mentioning the registration mark and seating capacity of the vehicle.

(g) **TAXATION:-** It is agreed that the transport vehicles covered by counter signature in the reciprocating State shall be exempted from payment of tax to the reciprocating State. This benefit of single point tax shall apply to the stage carriages having both regular and temporary permits of the routes included in the interstate agreement.

The benefit of single point tax shall also apply in respect of the routes finding of variations, extension, curtailment or pattern of trips that may be allowed on future dates.

**II. GOODS CARRIAGES:-** The quota of goods carriages of each State/Union Territory to be countersigned by the other in accordance with the provision to Section 88(5) of the Motor Vehicles Act, 1988 shall be 200 on payment of bilateral tax of Rs.1500/- per annum, provided that such vehicles shall not on their return journey pickup any goods in the reciprocating State/Territory for setting down at any place or route in that State/Union Territory.

**III. Motor Cabs:-** The quota of motor cabs of each State/Union Territory to be countersigned by the other State shall be 300 on single point tax basis.

**IV. GENERAL:**

a) It is agreed that the local conditions regarding speed, load, seating capacity, dimensions and prohibited roads in the reciprocating State shall be observed by the permit holders thereon. Any clause in this agreement may be amended or a new one added to it at any stage after mutual agreement between the State of Karnataka and Union Territory of Pondicherry.

b) Pending finalization of this agreement the State Transport Undertakings of Karnataka and Pondicherry Tourism and Tourism Development Corporation shall operate the buses covered in Annexure-A & B on single point tax basis from the date of signing this agreement.

By order and in the name of the Governor of Karnataka,

**RAMACHANDRA**
Under Secretary to Government
Transport Department

*Annexure - A*

**ROUTES TO BE OPERATED BY THE S.T.U. OF KARNATAKA**

| Sl. No. | Route | Route Length | | | | No. of Round Trips | No. of Buses | Service Kms.in Pondy |
|---|---|---|---|---|---|---|---|---|
| | With via Places | KTK | TN | PONDY | TOTAL | | | |
| 1. | Bangalore-Pondicherry via Hosur, krishnagiri, thiruvannamalai, Gingee, Tindivanam. | 35 | 251 | 19 | 305 | 2 | 2 | 76 |
| 2. | Bangalore-Mahe Via Mysore, Thalaserry | 273 | 64 | 6 | 343 | 2 | 2 | 24 |
| 3. | Bangalore-Thirunallar Via Hosur, Krishnagiri, Thiruvannamalai, Chidambaram, Karaikal. | 35 | 382 | 18 | 435 | 2 | 4 | 72 |
| **Total** | | | | | | **6** | **8** | **172** |

**Ramachandra**
Under secretary to Government
Transport Department

**Annexure-B**

**ROUTES TO BE OPERATED BY THE PONDICHERRY TOURISM AND TRANSPORT DEVELOPMENT CORPORATION**

| Sl. No. | Route | Route Length | | | | No. of Round Trips | No. of Buses | Service Kms.in KTK |
|---|---|---|---|---|---|---|---|---|
| | With via Places | PONDY | TN | KTK | TOTAL | | | |
| 1. | Pondicherry-Bangalore via Villupuram, Vettavalam, Thiruvannamalai, Krishnagiri, Hosur. | 25 | 246 | 35 | 306 | 2 | 2 | 140 |
| 2. | Pondicherry-Mahe via Villupuram, Vettavalam, thiruvannamalai, Krishnagiri, Hosur, Bangalore, Mysore, Thalaserry | 6 (Kerala-84 kms) | 246 (Kerala-84 kms) | 308 (Kerala-84 kms) | 624 | 1 | 2 | 616 |
| 3. | Mahe-Kollur via Thalaserry, Kannur, Kasargod, Mangalore, Kundapura | 6 (Kerala-173 kms) | 0 (Kerala-173 kms) | 129 (Kerala-173 kms) | 135 | 1 | 2 | 258 |
| 4. | Mahe-Mysore via Thalaserry | 6 (Kerala-64 kms) | 0 (Kerala-64 kms) | 167 (Kerala-64 kms) | 237 | 1 | 2 | 334 |
| 5. | Pondicherry-Kollur via Vllupuram, Krishnagiri, Hosur, Bangalore, Arsikere Shimoga, Thirthahalli | 25 | 246 | 524 | 795 | 1 | 2 | 1048 |
| **Total** | | | | | | **6** | **10** | **2396** |

**Ramachandra**
Under secretary to Government
Transport Department

ಹೊರವಲಯ ಮುದ್ರಣಾಲಯ, ಬೆಂಗಳೂರು-59